# ಅಚಲ

ಜುಲೈ 1992 ಬೆಲೆ ರೂ. 1-50





ಸಂಪುಟ 8 ಸಂಚಿಕೆ 8

"ಅಚಲ" ಪತ್ರಿಕೆಯನ್ನು ಪಡೆಯಬಯಸುವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹದಿನಾರು ರೂಪಾಯಿಗಳನ್ನು ಎಂ.ಓ./ಡ್ರಾಫ್ಟ್ ಮೂಲಕ ಕಳುಹಿಸಿ ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆಯಬೇಕು. ಚಂದಾದಾರರು ತಮ್ಮ ವಿಳಾಸ ಬದಲಾದರೆ ಕೂಡಲೇ ಕಾರ್ಡಿನಲ್ಲಿ ಬರೆದು ತಿಳಿಸಬೇಕು.

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
26, 1ನೇ ಮೇನ್, ವ್ಯೆಯಾಲಿ ಕಾವಲ್
ಬೆಂಗಳೂರು–560 003.

---

ಪುಸ್ತಕ ವಿಮರ್ಶೆಗಾಗಿ ಪುಸ್ತಕ ಕಳುಹಿಸುವವರು ದಯವಿಟ್ಟು ಎರಡು ಪ್ರತಿಗಳನ್ನು ಕಳುಹಿಸಬೇಕಾಗಿ ವಿನಂತಿ.

---

ಸಂಪಾದಕ ಮಂಡಳಿ :
ಎನ್. ಗಾಯತ್ರಿ, ನೇಮಿಚಂದ್ರ, ದೇವಿ,
ಡಾ॥ ಬಿ. ಎಸ್. ಸುಮಿತ್ರಾಬಾಯಿ

---

ಚಂದಾ ವಿವರ :

| | | |
|---|---|---|
| ವಾರ್ಷಿಕ ಚಂದಾ | : | ರೂ. 15–00 |
| ಬಿಡಿ ಪ್ರತಿ | : | ರೂ. 1–50 |
| ವಿಶೇಷ ಪ್ರತಿ | : | ರೂ. 5–00 |
| ಆಜೀವ ಚಂದಾ | | |
| ವ್ಯಕ್ತಿಗಳಿಗೆ | : | ರೂ. 150–00 |
| ಸಂಸ್ಥೆಗಳಿಗೆ | : | ರೂ. 200–00 |

Printed at : PRINTSWELL, 78, 3rd Main Road Nagappa Block, Srirampuram, Bangalore 21 & Published by Dr. G. Ramakrishna on behalf of Jagruthi Mahila Adhyayana Kendra
26, I Main, Vyalikaval, Bangalore-560003.
Editor : N. GAYATRI

ಶ್ರೀಮತಿ ಮಹಾಶ್ವೇತಾದೇವಿ ಪಶ್ಚಿಮ ಬಂಗಾಳದಲ್ಲಿ ಹೆಸರಾಂತ ವ್ಯಕ್ತಿ. ಬರಹಗಾರರಾಗಿ ಹಾಗೂ ಹೋರಾಟಗಾರ್ತಿಯಾಗಿ ಜನಮನ್ನಣೆಗಳಿಸಿರುವ ಅಪರೂಪದ ವ್ಯಕ್ತಿತ್ವ ಅವರದು. ಹೋರಾಟವೇ ಉಸಿರಾಗಿರುವ ಈ ಲೇಖಿಕಿ ಇತ್ತೀಚೆಗೆ ಬೆಂಗಳೂರಿಗೆ ಬಂದಿದ್ದರು. 'ಅಚಲ' ಅವರನ್ನು ಸಂದರ್ಶಿಸಿತು. ........ ಪುಟ 14 ರಲ್ಲಿ.

ಅವಿವಾಹಿತ ಮಹಿಳೆಯರು ಮಕ್ಕಳನ್ನು ದತ್ತು ಸ್ವೀಕರಿಸಬಹುದೆ ? ಇದಕ್ಕೆ ಇರುವ ಕಾನೂನು ಕಟ್ಟಳೆಗಳಾದರು ಏನು ? ಈ ಪ್ರಶ್ನೆಗಳಿಗೆ ಉತ್ತರ ಈ ಸಂಚಿಕೆಯ 'ಕಾನೂನು ಸಲಹೆ'
ಪುಟ 13ರಲ್ಲಿ

ಬಜೆಟ್ ಕುರಿತ ಚರ್ಚೆಯಲ್ಲಿ ಓದುಗರು ಪಾಲ್ಗೊಂಡಿದ್ದಾರೆ–ಸಂವಾದದಲ್ಲಿ
ಪುಟ 7ಕ್ಕೆ

# ಅಪರೂಪದ ನಕ್ಷತ್ರ

ಈಶ್ವರಚಂದ್ರ ವಿದ್ಯಾಸಾಗರರು ನಮ್ಮ ದೇಶದಆಧುನೀಕರಣದ ಇತಿಹಾಸದ ಆಗಸದಲ್ಲಿ ಅಪರೂಪ ಹೊಳಪಿನ ನಕ್ಷತ್ರ. ಮಹತ್ವದ ಸಮುದಾಯದ ಶಿಕ್ಷಣವಾದಿ, ಪ್ರಮುಖ ವಿಚಾರವಾದಿ, ಗಾಢವಾದ ಮಾನವತಾವಾದಿ. ರಾಷ್ಟ್ರ ಪ್ರೇಮ, ಮಾತೃಭಾಷಾ ಪ್ರೇಮ, ಮತ್ತುಸ್ವಾಭಿಮಾನ, ಸತ್ಯನಿಷ್ಠರಾದ ಈಶ್ವರಚಂದ್ರರು ಮಹಿಳೆಯರನ್ನು ಶೋಷಣೆ ಯಿಂದ ಬಿಡುಗಡೆ ಮಾಡಲು ನಡೆಸಿದ ಬಹುಮುಖ ಹೋರಾಟಗಳಿಂದಾಗಿ ನಮಗೆ ಸ್ಮರಣೀಯರು.

ವಿದ್ಯಾಸಾಗರರಿಗಿಂತ ಮೊದಲು ರಾಮಮೋಹನರಾಯ್ ಮುಂತಾದ ನಾಯಕರು ಸಾಮಾಜಿಕ ಸುಧಾರಣೆಗಾಗಿ ದಾರಿ ಸವೆಸಿದ್ದರು. ಆದರೆ ಅವರೆಲ್ಲರಿಗಿಂತ ಭಿನ್ನವಾಗಿ ತುಂಬಾ ಸಂಪ್ರದಾಯಸ್ಥ ಹಿನ್ನಲೆಯಿಂದ ಬಂದ ಈಶ್ವರ ಚಂದ್ರರು ತಮ್ಮ ಹಿನ್ನೆಲೆಯನ್ನು ಮೀರಿ ಬೆಳೆದರು. ಆ ಕಾಲದ ಸವಾಲನ್ನು ತುಂಬಾ ಸಮರ್ಥವಾಗಿ ಎದುರಿಸಿದರು. ತೀವ್ರವಾದ ಜ್ಞಾನದಾಹ, ಬಿಡುವಿರದ ಪರಿಶ್ರಮ. ಪ್ರಖರ ವಿಚಾರಶಕ್ತಿ, ಮಿತಿಯಿರದ ಕ್ರಿಯೋತ್ಸಾಹ, ಸದಾ ಪ್ರಯೋಗ ಚತುರತೆ, ಹೊಸ ವಿಚಾರಗಳಿಗೆ ತೆರದ ಬುದ್ಧಿ, ಮನಸ್ಸುಗಳಿದ್ದ ಈಶ್ವರಚಂದ್ರರು ‘ಹೊಸ ಚಿಗುರು ಹಳೆಬೇರು’ಗಳ ಅಪೂರ್ವ ಸಂಯೋಜನೆಯಂತಿದ್ದವರು. ಭಾರತೀಯರ ಪರಂಪರಾಗತ ಸಾಂಪ್ರದಾಯಿಕ ಸಂಸ್ಕೃತ ಭಾಷೆಯ ಜ್ಞಾನ ಸಂಪತ್ತನ್ನು ಆಳವಾಗಿ ಪಡೆದವರು ; ಪಾಶ್ಚಾತ್ಯರ ಪ್ರಖರ ವೈಚಾರಿಕತೆಯ ವೈಜ್ಞಾನಿಕ ಚಿಂತನ ಶಕ್ತಿಯನ್ನು ಆಂಗ್ಲ ಶಿಕ್ಷಣದಿಂದ ಸಾಧಿಸಿಕೊಂಡವರು. ಈ ರೀತಿ ಎರಡೂ ಜಗತ್ತಿನ ಎಲ್ಲ ಒಳ್ಳೆಯದನ್ನು ಮೇಳವಿಸುವ ಅವರ ವ್ಯಕ್ತಿತ್ವ ದೇಶವನ್ನು ಅರಿವು, ಪ್ರಗತಿಗಳತ್ತ ಮುನ್ನಡೆಸಿತು.

ಶಿಕ್ಷಣ ಪ್ರಸಾರದಿಂದ ದೇಶದ ಜನಸಾಮಾನ್ಯರಿಗೂ ಅರಿವನ್ನು ಹರಡಬೇಕೆಂಬ ಬಲವಾದ ನಂಬಿಕೆ ಅವರದು. ಸಮುದಾಯದ ಬಹುದೊಡ್ಡ ಅಂಗವಾದ ಮಹಿಳೆಯರು ಮೊದಲು ಶಿಕ್ಷಣದಿಂದ ಹೊಸ ಚೇತನ ಪಡೆದರೆ, ಜನಾಂಗವೇ ಪ್ರಗತಿ ಹೊಂದಿತೆಂದು ಗ್ರಹಿಸಿದ್ದವರು. ಯುವ ಜನತೆ, ಹೊಸ ಶಿಕ್ಷಣದಿಂದ ಆಧುನಿಕ ಮಾನವರಾಗಿ ತಮ್ಮ ದೇಶದ, ತಮ್ಮ ಭಾಷೆಯ ನೆಲೆಗಷ್ಟೇ ಸೀಮಿತರಾಗದೆ ಜಾಗತಿಕ ಮಾನವರಾಗಿ ಬೆಳೆಯುವಂತೆ ಮಾಡುವ ಶಿಕ್ಷಣ ಪದ್ಧತಿ ರೂಪು ಗೊಳ್ಳಬೇಕೆಂದು ಅವರ ಗುರಿ. ಭಾರತೀಯರ ಸಾಂಪ್ರಾದಾಯಿಕ ಬದುಕು ಮೂಢ, ಅರ್ಥಹೀನ ಧಾರ್ಮಿಕ ವಿಧಿಗಳು ನಿಸ್ಸತ್ವ ಕಂದಾಚಾರಗಳಲ್ಲಿ ಕುರುಡಾಗಿ ಸಾಗಿದ್ದಾಗ ಅವುಗಳ ವಿರುದ್ಧಸಿಡಿದೆದ್ದ ಈಶ್ವರ ಚಂದ್ರರು ಮಹಿಳೆಯರ ಶೋಷಣೆ ವಿರುದ್ಧ ಧ್ವನಿಯೆತ್ತಿ ಮಹಿಳೆಯರ ಹಕ್ಕುಗಳಿಗಾಗಿ, ನಡೆಸಿದ ಹೋರಾಟ ಅನನ್ಯ ರೀತಿಯದು. ಸ್ತ್ರೀಯರಲ್ಲಿ ಶಿಕ್ಷಣಕ್ಕಾಗಿ, ಬಾಲ್ಯ ವಿವಾಹ, ಬಹುಪತ್ನಿತ್ವಗಳ ವಿರುದ್ಧ, ವಿಧವಾ ವಿವಾಹದ ಪರವಾದ ಅವರ ಹೋರಾಟ ಏಕಾಂಗ ಹೋರಾಟ ವಾಗಿತ್ತು.

ಮಹಿಳಾ ಶಿಕ್ಷಣದ ಪ್ರಚಾರಕರಾಗಿದ್ದ ಡಾ॥ ಬೆಥೂನ್ ಅವರ ಜೊತೆಗೂಡಿ, ಬೆಥೂನ್ ಬಾಲಿಕಾ ಶಾಲೆ ಕಟ್ಟಿ, ಮೊದಲ ಬಾರಿಗೆ ಮಹಿಳೆಯರನ್ನು ಶಾಲೆಗೆ ಕರೆತಂದು ಕಲಿಸಿದ ಈಶ್ವರಚಂದ್ರರು ಶಾಲಾ ಇನ್ಸ್‌ಪೆಕ್ಟರ್ ಹುದ್ದೆ ದೊರೆತಾಗ ಸರ್ಕಾರದ ಬೆಂಬಲದಿಂದ ನಾಲ್ಕು ಜಿಲ್ಲೆಗಳಲ್ಲಿ 36 ಕ್ಕೂ ಹೆಚ್ಚು ಹೆಣ್ಣುಮಕ್ಕಳ ಶಾಲೆಗಳನ್ನು ಸ್ಥಾಪಿಸಿ ದರು. ಸರ್ಕಾರದ ಬೆಂಬಲವಿದ್ದಾಗ, ಬೆಂಬಲ ನಿಂತಾಗ ಕೂಡ ಸ್ವಂತ ಖರ್ಚಿನಿಂದ ಅವುಗಳನ್ನು ನಿರ್ವಹಿಸಿದರು. ಸರ್ಕಾರದ ಅಸಹಕಾರ ಹೆಚ್ಚಿದಾಗ ಆ ಇನ್ಸ್‌ಪೆಕ್ಟರ್ ಹುದ್ದೆಗೆ ರಾಜಿನಾಮೆಯಿತ್ತರು. ಆದರೆ ತಮ್ಮ ಗುರಿಯಿಂದ ದೂರ ವಾಗಲಿಲ್ಲ. ಹಿಂದೂ ಮೆಟ್ರೋಪಾಲಿಟಿನ್ ಸಂಸ್ಥೆಯಲ್ಲಿ ಸ್ತ್ರೀಯರ ಶಿಕ್ಷಣಕ್ಕಾಗಿ ಅವಿರತ ದುಡಿದು ಅವರು ಮಾಡಿದ ಸಾಧನೆ ಸ್ವತಃ ಆಂಗ್ಲ ಅಧಿಕಾರಿಗಳಿಗೂ ವಿಸ್ಮಯವುಂಟುಮಾಡಿದ್ದುಂಟು.

ಆ ಕಾಲಕ್ಕೆ ಅತ್ಯಂತ ಪ್ರಯಾಸಕರವಾಗಿದ್ದರೂ. ಪ್ರಾಣದ ಹಂಗು ತೊರೆದು ಈಶ್ವರಚಂದ್ರರು ಮಾಡಿದ ಮತ್ತೊಂದು ಮಹತ್ವದ ಸಾಧನೆ ವಿಧವಾ ವಿವಾಹ. ಸಹಗಮನ ಪದ್ಧತಿ ರದ್ದಾಗಿ ವಿಧವೆಯರ ಸಂಖ್ಯೆ ಹೆಚ್ಚಾಗಿತ್ತು.

'ಕುಲೀನವಾದ' ಎನ್ನುವುದು ಒಂದು ವ್ಯಾಧಿಯಂತೆ ಬೆಳೆದಿದ್ದು ವಿಧವೆಯರ ಹೆಚ್ಚಳಕ್ಕೆ ಕಾರಣವಾಗಿತ್ತು. ತಾವು ಕುಲೀನರೆನಿಸಿಕೊಳ್ಳಲು ಬ್ರಾಹ್ಮಣರು ವಯಸ್ಸಿಗೆ ಬರುವ ಮೊದಲೇ ತಮ್ಮ ಹೆಣ್ಣು ಮಕ್ಕಳ ಮದುವೆ ಮಾಡಬೇಕಿತ್ತು. ತಪ್ಪಿದರೆ ಸಮಾಜದ ಬಹಿಷ್ಕಾರ. ವರ ಸಿಗದಿದ್ದಾಗ ಹಲವಾರು ಪತ್ನಿಯರಿರುವ ಎಂಬತ್ತು ತೊಂಬತ್ತರ ಮುದುಕರಿಗೇ ಹುಡುಗಿಯರನ್ನು ಧಾರೆಯೆರೆಯುತ್ತಿದ್ದರು. ಮುದುಕ ಪತಿಯ ಮರಣದೊಂದಿಗೆ ಈ ಎಲ್ಲ ಪತ್ನಿಯರು ಎಳೆಯ ವಯಸ್ಸಿನಲ್ಲೇ ವೈಧವ್ಯಕ್ಕೊಳಗಾಗಿ ಬದುಕಿಡೀ ಕಣ್ಣೀರಲ್ಲಿ ಕಳೆಯಬೇಕಿತ್ತು, ಹೆರವರ ದಾಸ್ಯಕ್ಕೋ, ಅತ್ಯಾಚಾರ–ಭೋಗಗಳಿಗೋ ತುತ್ತಾಗಬೇಕಿತ್ತು. ಇಂಥ ವಿಷಮ ಪರಿಸ್ಥಿತಿಯಲ್ಲಿ ನರಳುತ್ತಿದ್ದ ಸ್ತ್ರೀಯರ ದುರವಸ್ಥೆಗೆ ಬಹು ವ್ಯಾಕುಲಗೊಂಡ ಈಶ್ವರ ಚಂದ್ರರು 'ಬಲಾತ್ಕಾರ ವೈಧವ್ಯ'ದ ವಿರುದ್ಧ ಪ್ರತಿಭಟಿಸಿ ಬಲವಾಗಿ ಹೋರಾಟ ನಡೆಸಿದರು.

ತಮಗಿದ್ದ ಪ್ರಾಚೀನ ಶಾಸ್ತ್ರ ಜ್ಞಾನ ಬಳಸಿ, ಸ್ಮೃತಿ ಗ್ರಂಥಗಳನ್ನು ಆಳವಾಗಿ ಶೋಧಿಸಿ, ಅವುಗಳ ವಿಚಾರಗಳ ಆಧಾರದಿಂದಲೇ ವಿಧವೆಯರ ಮರು ವಿವಾಹ ಶಾಸ್ತ್ರ ಸಮ್ಮತವಾದದೆಂದು ತರ್ಕಬದ್ಧವಾಗಿ ಪ್ರಚಾರ ಮಾಡಿದರು. 1856ರಲ್ಲಿ ಈಶ್ವರ ಚಂದ್ರರ ಈ ಹೋರಾಟದ ಫಲವಾಗಿ ವಿಧವಾ ವಿವಾಹಕ್ಕೆ ಅನುಮತಿ ನೀಡುವ ಹಿಂದೂ ಪುನರ್ವಿವಾಹ ಮಸೂದೆ ಜಾರಿಗೊಂಡಿತ್ತು. ಈ ದಿವ್ಯ ಸಾಧನೆಯನ್ನು ಸಮರ್ಪಕವಾಗಿ ಕಾರ್ಯಗೊಳಿಸಲು ವಿಧವೆ ತರುಣಿಯೊಬ್ಬಳನ್ನು ವಿಧುರನಿಗೆ ಕೊಟ್ಟು ಬಹು ವಿಜೃಂಭಣೆಯಿಂದ ಮದುವೆ ಮಾಡಿ ಸಾಮಾಜಿಕವಾಗಿ ಒಂದು ಡೆಮಾನ್‌ಸ್ಟ್ರೇಷನ್ ನಡೆಸಿದ ದಾಖಲೆ ಅಪರದಾಯಿತು. ಇದರಿಂದ ಸ್ಫೂರ್ತಿಗೊಂಡ ಈಶ್ವರಚಂದ್ರರ ಮಗ ಸ್ವತಃ ಒಬ್ಬ ವಿಧವೆಯನ್ನು ಮದುವೆ ಆದಾಗ ಈಶ್ವರ ಚಂದ್ರರು ತಮ್ಮ ವಿಚಾರ, ಹೋರಾಟ ಸಾರ್ಥಕವಾದಂತೆ ಸಂತೋಷ ಅನುಭವಿಸಿದರು.

ಈ ಎಲ್ಲ ಕಾರ್ಯದರ್ಶಿಕೆಯಿದ್ದರೂ, ಸನಾತನ ಧರ್ಮದ ಸಂಪ್ರದಾಯವಾದಿ ಸಮಾಜ ಈ ಹೊಸ ಕಾನೂನನ್ನು ಜನಪ್ರಿಯವಾಗಗೊಡಲಿಲ್ಲ. ವಿದ್ಯಾಸಾಗರರ ವಿರುದ್ಧ ಪ್ರಬಲವಾದ ಅಪಪ್ರಚಾರ, ಆಪಾದನೆ, ನಿಂದನೆ, ತಿರಸ್ಕಾರ, ಆಕ್ರಮಣಗಳು ವ್ಯಕ್ತವಾದವು. ಆದರೂ ಅವರು ಹಿಂದೂ ಸಮಾಜದಲ್ಲಿ ಪುರುಷರ ನಿರ್ದಯಿ ಕ್ರೂರ ಸಂಪ್ರದಾಯಗಳಡಿಯಲ್ಲಿ ಹೆಣ್ಣುಮಕ್ಕಳ ಬದುಕುಗಳು ಹೊಸಕಿ ಹಾಕಲ್ಪಡುವುದರ ವಿರುದ್ಧ ಬರೆಯುತ್ತಾ, ಪ್ರಚಾರ ಮಾಡುತ್ತಾ ಬಹು ಪತ್ನಿತ್ವದ ವಿರುದ್ಧವಾಗಿ ಜನಜಾಗೃತಿಗಾಗಿ ಬಹುವಾಗಿ ಏಕಾಕಿಯಾಗಿ ಶ್ರಮಿಸಿದರು. 1857ರಲ್ಲಿ ದೇಶದಲ್ಲಿ ಎದ್ದ ಸಿಪಾಯಿದಂಗೆಯಿಂದಾಗಿ ಜನರ, ಸರ್ಕಾರದ ಆಸಕ್ತಿಗಳು ಈ ಬಗೆಯ ಸುಧಾರಣೆಗಳಿಂದ ಬೇರೆಡೆ ಹೊರಳಿದವು, ಹೀಗಾಗಿ ಸಹಸ್ರಾರು ಜನರ ಸಹಿ ಸಂಗ್ರಹಿಸಿ, ಬಹುಪತ್ನಿತ್ವವನ್ನು ರದ್ದು ಮಾಡುವಂಥ ಕಾನೂನನ್ನು ಜಾರಿಗೊಳಿಸಲು ಈಶ್ವರಚಂದ್ರರು ನಡೆಸಿದ ಯತ್ನ ಸಫಲವಾಗಲಿಲ್ಲ.

ಆದರೆ ಅವರು ಬದುಕಿದ್ದ ಅವಧಿಯಲ್ಲೇ ಕ್ರಮವಾಗಿಯಾದರೂ ಜನ ಅವರ ವಿಚಾರ, ಕಾರ್ಯಗಳ ಮಹತ್ವ ಗುರುತಿಸತೊಡಗಿದರು. ಈಶ್ವರ ಚಂದ್ರರು ಕಂಡ ಸ್ತ್ರೀ ಪ್ರಗತಿಯ ಗುರಿ, ಕಾಲಾಂತರದಲ್ಲಿ ಹೆಚ್ಚು ಬೆಳವಣಿಗೆ ಕಂಡಿತು.

ಸಂಪ್ರದಾಯಸ್ಥ ಸಮಾಜವನ್ನು ತಿದ್ದಲು, ಸಂಪ್ರದಾಯದ್ದೇ ಆಧಾರಗಳನ್ನು ಬಳಸಿದ್ದು, ಧರ್ಮಾತೀತ ಶಿಕ್ಷಣದ ಮೂಲಕ ನವ ಪೀಳಿಗೆಯಲ್ಲಿ ಆರೋಗ್ಯಕರ ಪ್ರಗತಿಪರ ಮನೋಧರ್ಮ ಹುಟ್ಟುಹಾಕಲು ಯತ್ನಿಸಿದ್ದು, ಎಂಥ ಕಷ್ಟಗಳ ಎದುರೂ ಛಲಬಿಡದೆ ತಮ್ಮ ತತ್ವಕ್ಕೆ ಅಂಟಿಕೊಂಡಿದ್ದು ಈಶ್ವರಚಂದ್ರರ ಅನನ್ಯತೆಯ ಅಂಶಗಳು. ಸಾಂಪ್ರದಾಯಿಕವಾದ ತನ್ನ ಪರಂಪರೆಯ ನಿರ್ದಿಷ್ಟ ಅರಿವು ಇದ್ದ ಪಂಡಿತರು, ಯೂರೋಪಿನಿಂದ ತಾವು ಒಳ್ಳೆಯದೆಂದು ನಂಬಿದ್ದನ್ನು ಸ್ವೀಕರಿಸುವಲ್ಲಿ ಎಂದೂ ಇಬ್ಬಂದಿತನವನ್ನು ತೋರಲಿಲ್ಲ. ಹಳೆ ಕಾಲದ ಪಂಡಿತರಂತೆ ಸರಳ ವೇಶ ತೊಟ್ಟರೂ ವಿಚಾರದಲ್ಲಿ ಪ್ರಗತಿಪರತೆಯನ್ನು ತೊರೆಯಲಿಲ್ಲ. ಧಾರ್ಮಿಕ ಆಚರಣೆಗಳಿಗೆ, ಆಡಂಬರದ ದೈವಭಕ್ತಿಗೆ ದಾಸರಾಗಲಿಲ್ಲ, ಇಂಥ ಪ್ರಖರ ವೈಚಾರಿಕತೆಯ ವಿದ್ಯಾಸಾಗರರು ಮರಣ ಹೊಂದಿ ನೂರುವರ್ಷವಾಗಿರುವ ಈ ಹೊತ್ತಿನಲ್ಲಿ ಅವರ ವಿಚಾರಗಳು, ಕ್ರಿಯಾಶೀಲತೆ, ಸಾಧನೆಯ ಬದುಕು ಇಂದಿಗೆ ದೊಂದಿಯಾಗಬೇಕಿದೆ.



—ಬಿ. ಎನ್. ಸುಮಿತ್ರಾ ಬಾಯಿ

# ಸತ್ಯಜಿತ್‌ರಾಯ್ ಅವರ ಕೆಲವು ಚಿತ್ರಗಳಲ್ಲಿ ಸ್ತ್ರೀದೃಷ್ಟಿ

❋ ಮಾಲಿನಿ ಭಟ್ಟಾಚಾರ್ಯ

'ಸ್ತ್ರೀವಾದಿ ವಿಮರ್ಶೆ'ಯಲ್ಲಿ ಆಗಾಗ್ಗೆ 'ಸ್ತ್ರೀದೃಷ್ಟಿ ಕೋನ' ಎಂಬ ಪದದ ಬಳಕೆಯನ್ನು ಕಾಣುತ್ತಿರುತ್ತೇವೆ. ಈ ಬಳಕೆ ಸಾಮಾನ್ಯವಾಗಿ ಹೆಣ್ಣಿನಿಂದ ರಚಿತವಾದ ಸೃಜನ ಶೀಲ ಕೃತಿಯೊಂದರಲ್ಲಿ ಕಂಡು ಬರುವ ದೃಷ್ಟಿ ಕೋನವನ್ನು ಕರಿತದ್ದಾಗಿರುತ್ತದೆ. ಅಂತಹ ಕಲಾ ಕೃತಿಯಲ್ಲಿ ಸ್ತ್ರೀ ಪಾತ್ರಗಳು ನಿರ್ದಿಷ್ಟವಾದ ಪೂರ್ವ ನಿರ್ಧಾರಿತ ಮೌಲ್ಯಗಳನ್ನು ಹೊಂದಿರುತ್ತದೆಂದೂ ಮತ್ತು ಆ ದೃಷ್ಟಿ ಕೋನದ ಮೂಲಕವೇ ಕಲಾಕೃತಿಯ ರಚನೆ ಸಿದ್ಧಗೊಂಡಿರುತ್ತದೆಂಬ ನಂಬಿಕೆಯಲ್ಲಿ ವ್ಯಕ್ತವಾಗುವುದನ್ನು ಕಾಣುತ್ತೇವೆ.

ಆದರೆ ನಾನಾದರೋ ಇದಕ್ಕೆ ಭಿನ್ನವಾಗಿ ಚಿಂತಿಸುವುದರಿಂದ ಈ ಅಭಿಪ್ರಾಯವನ್ನು ಪ್ರಶ್ನಿಸುತ್ತೇನೆ. 'ಸ್ತ್ರೀದೃಷ್ಟಿಕೋನ' ವೆಂಬುದು ಸ್ತ್ರೀಯರಿಗೇ ವಿಶಿಷ್ಟವಾದದ್ದೇನೂ ಆಗಿರಬೇಕಿಲ್ಲ. ಕಲಾ ಕೃತಿಯಲ್ಲಿನ ದೃಷ್ಟಿ ಕೋನಕ್ಕೆ ಯಾವುದೇ ಲಿಂಗಬೇಧವಿಲ್ಲದಿರುವುದರಿಂದ ಸ್ತ್ರೀ—ಪುರುಷರೆಂಬ ಬೇಧವಿಲ್ಲದೆ ಯಾರು ಬೇಕಾದರೂ ಈ ದೃಷ್ಟಿಕೋನವನ್ನು ಕಲಾ ತಂತ್ರವಾಗಿ ಬಳಸಬಹುದು. ಈ 'ಸ್ತ್ರೀ ದೃಷ್ಟಿಕೋನವನ್ನು ನಮ್ಮ ಕಾಲದ ಮಹಾನ್ ಸಾಹಿತಿಗಳ ಕೃತಿಗಳಲ್ಲಿ ನೋಡಬಹುದಾಗಿದೆ. ಚೆಕೊವ್ ಮಾಣಿಕ್ ಬಂಡೋಪಾಧ್ಯಾಯ, ಋತ್ವಿಕ್ ಘಟಕ್, ಮುಂತಾದವರ ಕೃತಿಗಳಲ್ಲಿ ಇದನ್ನು ನೋಡಬಹುದಾಗಿದೆ. ಹಾಗೆಯೇ ಸತ್ಯಜಿತ್‌ರಾಯ್ ಕೂಡ ಅವರ ಆರಂಭದ ಮತ್ತು ಅತ್ಯಂತ ಯಶಸ್ವೀ ಚಿತ್ರಗಳಲ್ಲಿ ಈ 'ಸ್ತ್ರೀ ದೃಷ್ಟಿ ಕೋನ'ವನ್ನು ಬಹು ಸಮರ್ಥವಾಗಿ ಕಾಣಿಸಿದ್ದಾರೆ. ಅವರ 'ಪಥೇರ್ ಪಾಂಚಾಲಿ' ಚಿತ್ರ 'ಅಪ್ಪೂನ' ಚಿತ್ರ ಎನ್ನುವುದಕ್ಕಿಂತ ಸರ್ವಜಯ ಮತ್ತು ದುರ್ಗಳ ಚಿತ್ರವೆನ್ನುವುದೇ ಹೆಚ್ಚು ಸೂಕ್ತ. ಅಲ್ಲಿನ ಮಹಿಳೆಯರು ನಮ್ಮನ್ನು ಹೆಚ್ಚು ಆಕರ್ಷಿಸುತ್ತಾರೆ. ಅದೇ ಲಕ್ಷಣಗಳು 'ಮಹಾನಗರ' ಮತ್ತು 'ಚಾರುಲತಾ' ಚಿತ್ರಗಳಲ್ಲಿ ಹೊಸ ಆಯಾಮವನ್ನು ಪಡೆಯುತ್ತವೆ. 'ಸ್ತ್ರೀ ದೃಷ್ಟಿಯೊಂದಿಗೆ ಕ್ಯಾಮರಾ ತನ್ನನ್ನು ಗುರುತಿಸಿಕೊಳ್ಳುವುದಲ್ಲದೆ ಸ್ತ್ರೀ ದೃಷ್ಟಿಯ ಮೇಲೆ ತನ್ನ ಗಮನವನ್ನು ಕೇಂದ್ರೀಕರಿಸುತ್ತದೆ.

'ಪಥೇರ್ ಪಾಂಚಾಲಿ'ಯಲ್ಲಿ ಗಟಗಟನೆ ಕುಡಿಯುತ್ತಿರುವ ಹಾಲಿನ ಬಟ್ಟಲಿನ ಹಿಂಭಾಗದಿಂದ ಅಪ್ಪೂನ ಮಗ ಗೋಚರಿಸುವುದನ್ನು ಗಮನಿಸಿ. ದುರ್ಗಾ ಅವನನ್ನು ಪ್ರೀತಿಯಿಂದ ನೋಡುತ್ತಾಳೆ. ನಾವು ದುರ್ಗನ ಕಣ್ಣುಗಳ ಮೂಲಕ ಅವನನ್ನು ನೋಡುತ್ತೇವೆ. ಅವನನ್ನು ನೋಡಿದ ನಂತರ ನಮ್ಮ ದೃಷ್ಟಿ ದುರ್ಗಾಳ ಮುಖದತ್ತ ತಿರುಗುತ್ತದೆ. ಅವಳ ಪ್ರೀತಿಯೆಲ್ಲಾ ಅಪ್ಪೂನ ಬಗ್ಗೆ ಮುಳುಗಿಹೋಗಿರುತ್ತದೆ. ಅಪು ಹಾಲು ಕುಡಿಯುತ್ತಾನೆ. ಅವಳು ಶಾಲೆಗೆ ಹೋಗುವುದಿಲ್ಲ. ದುರ್ಗ ಹಾಲು ಕುಡಿಯುವುದಿಲ್ಲ. ಈ ಸಂಗತಿಗಳನ್ನು ದುರ್ಗ ನಮಗೆ ಹೇಳುವುದಿಲ್ಲ. ಅವಳಿಗೆ ಈ ವಿಷಯಗಳ ಅರಿವೂ ಇಲ್ಲ. ಆದರೂ ಚಿತ್ರದಲ್ಲಿನ ದುರ್ಗಳ ಪಾತ್ರ ಈ ಎಲ್ಲ ಅಂಶಗಳನ್ನೂ ಪ್ರತಿಬಿಂಬಿಸುತ್ತದೆ. ಅಪ್ಪುವನ್ನು ಮತ್ತೊಂದು ದೃಷ್ಟಿಯಿಂದ ನೋಡುವ ಸರ್ವಜಯ ಕೂಡ ಅವನನ್ನು ಕೇಂದ್ರ ಆಕರ್ಷಣೆಯಾಗಿಯೇ ಪರಿಗಣಿಸುತ್ತಾಳೆ. ಅವಳು ದುರ್ಗಾಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸುತ್ತಾಳೆ. ಅವಳ ಸಾವಿನ ನಂತರವೇ ಹರಿಹರ್ ಮತ್ತು ಸರ್ವಜಯ ಇಬ್ಬರ ಗಮನವೂ, ತೀವ್ರ ಭಾವನೆಗಳೂ ದುರ್ಗಳ ಸುತ್ತ ಹರಿಯುತ್ತದೆ.

ಸತ್ಯಜಿತ್‌ರಾಯ್‌ರವರನ್ನೊಮ್ಮೆ ಸಂದರ್ಶನವೊಂದರಲ್ಲಿ ಅವರು ಹಿಂಸೆಯನ್ನು ಚಿತ್ರದಲ್ಲಿ ತೋರುವ ಔಚಿತ್ಯದ ಬಗ್ಗೆ ಕೇಳಿದಾಗ, ಅದಕ್ಕೆ ಉತ್ತರಿಸುತ್ತಾ ಅವರು 'ಪಥೇರ್ ಪಾಂಚಾಲಿ'ಯಲ್ಲಿ ಹಿಂಸೆಯನ್ನು ಬಳಸಿರುವುದಾಗಿ ಒಪ್ಪಿಕೊಳ್ಳುತ್ತಾರೆ. ಇದು ದೈಹಿಕ ಮತ್ತು ಮಾನಸಿಕವಾದ ಹಿಂಸೆಯೆರಡೂ ಆಗಿದೆ. ಮುಖ್ಯವಾಗಿ ಇಲ್ಲಿ ಈ ಹಿಂಸೆಯನ್ನು ಆಚರಿಸುವವಳು ಸರ್ವವಿಜಯ. ಚಿತ್ರದಲ್ಲಿ ಬರುವ ಮುದುಕಿ ಇಂದಿರಾ ಠಾಕೂರಾಣಿಯತ್ತ ಮತ್ತು ಅವಳ ಮಗಳಾದ ದುರ್ಗಳಿಗೆ ತೋರಿಸುವ

ಪ್ರಕ್ರಿಯೆಯಲ್ಲಿ ಈ ಅಂಶ ಸ್ಪಷ್ಟವಾಗಿ ಎದ್ದು ಕಾಣುತ್ತದೆ. ಇವರಿಬ್ಬರೂ ಸಮಾನವಾಗಿ ಶೋಷಿಸಲ್ಪಟವರು. ದುರ್ಗಾ ಮತ್ತು ಇಂದಿರಾ ಠಾಕೂರಾಣಿಯಿಬ್ಬರ ದೃಷ್ಟಿಯಲ್ಲೂ ಸರ್ವಜಯ ಅಧಿಕಾರ ಮತ್ತು ಶೋಷಕ ಕೇಂದ್ರವಾಗಿದ್ದಾಳೆ. ಅವಳು ಇಂದಿರಾ ಠಾಕೂರಾಣಿಯನ್ನು ಮನೆಯಿಂದ ಹೊರಗಟ್ಟಬಲ್ಲಳು ; ಹಾಗೆಯೇ ದುರ್ಗಾಳನ್ನು ನಿಷ್ಪ್ರಯೋಜಕಳೆಂದು ಜರಿದು ಮನೆಗೆಲಸದಲ್ಲಿ ತೊಡಲ ಬಲಾತ್ಕರಿಸುವಳು.

ಇಷ್ಟೆಲ್ಲಾ ಆದರೂ ಸರ್ವಜಯಳ ದೃಷ್ಟಿಯನ್ನು ಗಮನಿಸಿದಾಗ ಮತ್ತೆ ಮತ್ತೆ ಈ ಹಿಂಸೆಯ ಮೂಲ ಮತ್ತು ಕಾರಣವನ್ನು ಅವಳ ಸುತ್ತಮುತ್ತಲಿನ ಪರಿಸರದಲ್ಲಿ ಕಾಣುವಂತೆ ಮಾಡುತ್ತದೆ. ಅವಳೂ ಕೂಡ ಆ ಪರಿಸರದಲ್ಲಿ ಬಲಿಪಶುವೇ ಆಗಿದ್ದಾಳೆ. ದುರ್ಗ ಸರ್ವಜಯ ಮತ್ತು ಇಂದಿರಾ ಠಾಕೂರಾಣಿಯವರ ಕಣ್ಣುಗಳನ್ನು ಮತ್ತೆ ಮತ್ತೆ ಒಟ್ಟಾಗಿಯೇ ನೋಡುವಂತೆ ನಮ್ಮನ್ನು ಒತ್ತಾಯಿಸುತ್ತದೆ. ಈ ಪ್ರಕ್ರಿಯೆಯಲ್ಲಿ ಆ ಪಾತ್ರಗಳು ಒಬ್ಬರನ್ನೊಬ್ಬರು ನೋಡಲಾಗದಂತಹ ದೃಷ್ಟಿಯೊಂದನ್ನು ನಾವು ನೋಡಲು ಸಾಧ್ಯವಾಗುತ್ತದೆ.

ಸಾಮಾಜಿಕ ಸಂಬಂಧಗಳಲ್ಲಿ ಹುಟ್ಟಿರುವ ಹಿಂಸೆಯ ಮತ್ತೊಂದು ಮುಖವನ್ನು ದೇವಿ ಚಿತ್ರದಲ್ಲಿ ನೋಡಬಹುದು. ಜಮೀನ್ದಾರ ಕುಟುಂಬದ ಸೊಸೆ 'ದಯಾ'ಳ ಕಣ್ಣಿನಲ್ಲಿ ಈ ಹಿಂಸೆಯ ನೋವಿನ ಛಾಯೆಯನ್ನು ಗುರುತಿಸ ಬಹುದು. ಮಾವನ ಕನಸಿನಲ್ಲಿ ಕಾಣಿಸಿಕೊಂಡ ದೇವಿಯ ಪ್ರತಿರೂಪವಾಗಿ ನಿಜ ಜೀವನದಲ್ಲೂ ಸೊಸೆ ದಯಾ 'ದೇವಿ'ಯ ಸ್ಥಾನ ಅಲಂಕರಿಸಬೇಕಾಗುತ್ತದೆ. ಅವಳು ದೇವತೆಯಾಗಿ, ಮಾತ್ರ ಈ ಚಿತ್ರದಲ್ಲಿ ಕಾಣಿಸಿಕೊಳ್ಳದೆ ಸಮಾಜದ ಮೂಢ ನಂಬಿಕೆಗೆ ಬಲಿಯಾದ ಬಲಿಪಶುವಾಗಿ ಚಿತ್ರಿತಳಾಗಿದ್ದಾಳೆ.

ಕಾಳಿ ಆರಾಧಕನಾದ ಜಮೀನ್ದಾರ ಮಾವನು ತನ್ನ ಸೊಸೆಯನ್ನು ಕುರಿತು ತಳೆಯುವ ದೃಷ್ಟಿಯನ್ನು ಕೆಲವು ವಿಮರ್ಶಕರು ಫ್ರಾಯ್ಡ್‌ನ ಮನೋ ವೈಜ್ಞಾನಿಕ ವಿಶ್ಲೇಷಣೆಯ ಪ್ರಭಾವವನ್ನು ಗುರುತಿಸುತ್ತಾರೆ. ಈ ಸಲಹೆಯನ್ನು ಪರಾಮರ್ಶಿಸಬಹುದಾದರೂ, ಇದಕ್ಕಿಂತ ಹೆಚ್ಚಿನ ಸಂಬಂಧವನ್ನು ಇಲ್ಲಿ ಕಾಣಬಹುದಾಗಿದೆ. ಅಧಿಕಾರದಿಂದ ನಿರ್ವಹಿಸಲ್ಪಟ್ಟ ಸಂಬಂಧಗಳೇ ಇಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಮನೆಯಲ್ಲಿ ತನ್ನ ನಿರ್ಣಯವೇ ಅಂತಿಮವೆಂದು ನಿರ್ದೇಶಿಸಿ ಅಧಿಕಾರದ ಕೇಂದ್ರೀಕೃತ ಶಕ್ತಿಯಾಗಿ ಮೆರೆದರೂ ಮಾವ ಸೊಸೆಯೊಂದಿಗೆ ವರ್ತಿಸುವಾಗ ಮಾತ್ರ ಅತ್ಯಂತ ನಯ, ವಿನಯಗಳ ನಡತೆಯನ್ನು ತೋರಿಸುತ್ತಾನೆ. ಆದರೆ ಇಲ್ಲಿ ದಯಾ ಮಾವನ ಕೈಯಲ್ಲಿ ಉಪಕರಣವಾಗಿ ಮಾತ್ರ ಬಳಕೆಯಾಗದೆ, ಅವಳ ಪ್ರತಿನಿಧಿಸುವ ಅಧಿಕಾರದ ಸಾಕಾರವಾಗಿ ಕೂಡಾ ಚಿತ್ರಿಸಲ್ಪಟ್ಟಿದ್ದಾಳೆ. ಆದ್ದರಿಂದಲೇ ಈ ಅಧಿಕಾರವನ್ನು ಸರ್ವಸಮ್ಮತವಾಗಿ, ನ್ಯಾಯಬದ್ಧವಾಗಿ, ಒಪ್ಪಿಕೊಳ್ಳುವಂತೆ ದಯಾಳ ಹೊಸ ಪಾತ್ರವನ್ನು ಎಲ್ಲರೂ ಒಪ್ಪಿಕೊಳ್ಳಲು ಒತ್ತಾಯಿಸಲಾಗುತ್ತದೆ. ಅವಳು ಪ್ರೀತಿಸುವ ಮಗುವನ್ನು ಗುಣಮುಖವನ್ನಾಗಿ ಮಾಡಲು ದಯಾ ಸೋತಾಗ, ಆ ಮನೆಯ ವಂಶದ ಕುಡಿ ನಾಶವಾಗುತ್ತದೆ. ನಂಬಿಕೆಯ ಮೇಲೆ ನಿಂತಿದ್ದ ಅಧಿಕಾರಶಾಹಿಯ ಒಟ್ಟು ರಚನೆ ಕುಸಿದು ಬೀಳುತ್ತದೆ.

'ದೇವಿ' ಚಿತ್ರದಲ್ಲಿನ ದಯಾ ಪ್ರತಿಭಟಿಸುವುದಿಲ್ಲ. ಆದರೆ ಚಿತ್ರದ ನಿರೂಪಣೆಯ ಶೈಲಿಯಲ್ಲಿಯೇ ಈ ಪ್ರತಿಭಟನೆ ಕಂಡುಬರುತ್ತದೆ. ದಯಾಳ ಪಾತ್ರದಲ್ಲಿ ದೈವತ್ವದ ಆವಾಹನೆಯಾಗಿದ್ದರೂ ಅವಳಲ್ಲಿ ಸ್ತ್ರೀದೃಷ್ಟಿಗೆ ಕುಂದೇನೂ ಬರುವುದಿಲ್ಲ. ಅವಳ ವ್ಯಕ್ತಿತ್ವವನ್ನು ಸಮಾಜದ ಮೂಢ ನಂಬಿಕೆಗಳು ಎಷ್ಟರ ಮಟ್ಟಿಗೆ ಬಳಸಿಕೊಂಡಿವೆ. ಎಂಬುದನ್ನು ಗ್ರಹಿಸಲು ಅವಳ ಕೈಯಲ್ಲಿ ಸಾಧ್ಯವಾಗುವುದೇ ಇಲ್ಲ. ಆದ್ದರಿಂದಲೇ ಅವಳ ಕಣ್ಣಿನಲ್ಲಿ ದೇವತೆಯ ಕಣ್ಣುಗಳಲ್ಲಿರಬೇಕಾದ ದೃಷ್ಟಿ ಕಾಣೆಯಾಗಿವೆ. ಆದ್ದರಿಂದಲೇ ಇಲ್ಲಿನ ಸ್ಥಿತಿಯನ್ನು ಗ್ರಹಿಸುವ ಶಕ್ತಿ ಚಿತ್ರ ನಿರೂಪಕನ ದೃಷ್ಟಿಯಲ್ಲಿ ಕಂಡುಬರುತ್ತದೆ. ಆದರೆ ಇದನ್ನು ಹೇಗೆ 'ಸ್ತ್ರೀ ದೃಷ್ಟಿ' ಎಂದು ಕರೆಯಬಹುದು ಎಂಬ ಸಮಸ್ಯೆ ಬರಬಹುದು. ಆದ್ದರಿಂದಲೇ ಈ ಪರಿಕಲ್ಪನೆಯನ್ನು ವಿವರಿಸಲು ಅಲ್ಲಿನ ಘಟನೆಯನ್ನು ಬಳಸದೆ ತಾರ್ಕಿಕ ವಿಶ್ಲೇಷಣೆಗೆ ಹೆಚ್ಚು ಮಹತ್ವ ಕೊಡಲು ಇಷ್ಟಪಡುತ್ತೇನೆ. ಕನ್ನಡಿಯನ್ನು ದೃಷ್ಟಿಸುವ ಆ ಕಣ್ಣುಗಳು ಆ ಚಿತ್ರದಾಚಿನ ವ್ಯಕ್ತಿತ್ವವನ್ನು ಗ್ರಹಿಸಲು ಅಸಮರ್ಥವಾಗುವುದರಿಂದ ನಿರೂಪಕನ ನಿರೂಪಣೆಯಲ್ಲಿಯೇ ಸ್ತ್ರೀ ದೃಷ್ಟಿಯನ್ನು ಗುರುತಿಸಬಹುದಾಗಿದೆ.

(17ನೇ ಪುಟಕ್ಕೆ)

# 'ಎಲ್ಲ ವರ್ಗಕ್ಕೂ ದೊರೆಯಲಿ'

**ಕೇಂದ್ರ ಹಣಕಾಸು ಸಚಿವ ಡಾ. ಮನ್‌ಮೋಹನ್ ಸಿಂಗ್ ಅವರು ಮಂಡಿಸಿದ 1992–93ನೇ ಸಾಲಿನ ಬಜೆಟ್‌ನಲ್ಲಿ ದುಡಿಯುವ ಮಹಿಳೆಯರಿಗೆ ವರಮಾನ ತೆರಿಗೆಯಲ್ಲಿ ಸ್ವಲ್ಪ ವಿನಾಯಿತಿ ತೋರಲಾಗಿದೆ ಸಮಾಜದ ವಿವಿಧ ವರ್ಗಗಳಿಗೆ ಸೇರಿದ ಕೆಲವರ ಪ್ರತಿಕ್ರಿಯೆಯನ್ನು 'ಅಚಲ' ಕೇಳಿದಾಗ ಬಂದ ಅಭಿಪ್ರಾಯಗಳು ವಿಭಿನ್ನ. ಅದನ್ನು ಇಲ್ಲಿ ಕೊಡಲಾಗಿದೆ.**

ಹಲವು ರೀತಿಗಳಲ್ಲಿ ವಿಶಿಷ್ಟವಾದ ಈ ಸಾಲಿನ ಬಜೆಟ್ ಕೆಲವರಿಂದ 'ಮನಮೋಹಕ' ಎಂದು ಕರೆಸಿಕೊಂಡಿದೆ. ಆದರೆ ಅದು ಎಷ್ಟರ ಮಟ್ಟಿಗೆ ಮೋಹಕ ಅಥವಾ ಬಾಧಕ ಎನ್ನುವುದು ಸಧ್ಯದಲ್ಲೇ ವೇದ್ಯವಾಗುತ್ತದೆ. ಪ್ರಸಕ್ತ ವಿಷಯಕ್ಕೆ ಸಂಬಂಧಪಟ್ಟಂತೆ ಎರಡು ಅಂಶಗಳು ಸ್ಪಷ್ಟ.

1. ಏರುತ್ತಿರುವ ಬೆಲೆ ಮತ್ತು ಇಳಿಯುತ್ತಿರುವ ರೂಪಾಯಿಯ ಮೌಲ್ಯವನ್ನು ನೋಡಿದರೆ ಮನಮೋಹನ್ ಸಿಂಗ್ ಅವರ ತೆರಿಗೆ ವಿನಾಯಿತಿ ಅತ್ಯಂತ ಕನಿಷ್ಠ.

## ಸಂವಾದ

2. ಬಜೆಟ್‌ನಲ್ಲಿ ಅಡಗಿರುವ ಕಠಿಣ ಸತ್ಯಗಳನ್ನು ನೇರವಾಗಿ ಹೇಳದೆ ಮತ್ತು ಮುಂಬರುವ ದಿನಗಳಲ್ಲಿ ಜನ ಸಾಮಾನ್ಯರೆಲ್ಲರೂ ಒಳಗಾಗಬೇಕಾಗಿರುವ ಆರ್ಥಿಕ ಸಂಕಷ್ಟಗಳನ್ನೂ ತಾತ್ಕಾಲಿಕವಾಗಿಯಾದರೂ ಜನ ಮರೆಯುವಂತೆ ಮಾಡಲು ಹಲವು 'ಸ್ಟಂಟ್'ಗಳನ್ನೂ ಅರ್ಥ ಸಚಿವರು ಮಾಡಿದ್ದಾರೆ. ದುಡಿಯುವ ಮಹಿಳೆಯರಿಗೆ ನೀಡಿರುವ ಈ ಅಲ್ಪ ವಿನಾಯಿತಿ ವಿನಾಕಾರಣ ಅಸಮಾಧಾನದ ಹೊಗೆಗೆ ಆಸ್ಪದ ನೀಡಿದೆ, ತೀರ ನಿಕೃಷ್ಟ ಸ್ಥಿತಿಯಲ್ಲಿರುವ ಮಹಿಳೆಯರ ವರಮಾನವನ್ನು ಹೆಚ್ಚಿಸುವ ಬಗ್ಗೆ ಯಾವ ಯೋಜನೆಗಳೂ ಇಲ್ಲ. ಆದರೆ ತೆರಿಗೆ ನೀಡಬಲ್ಲ ಮಹಿಳೆ ಇತರ ಮಹಿಳೆಯರಿಗಿಂತ ಆರ್ಥಿಕವಾಗಿ ಉತ್ತಮ ಮಟ್ಟದಲ್ಲಿದ್ದಾಳೆಂದುಕೊಂಡರೆ ಈ ತೆರಿಗೆ ವಿನಾಯಿತಿಯಿಂದ ಮಹಿಳೆ, ಮಹಿಳೆಯರಲ್ಲೇ ಅಂತರವನ್ನೂ ಬೆಳಸುವಂತಾಗುವುದಲ್ಲವೇ ? ಜತೆಗೆ ಇಂತಹ 'ಜನಪ್ರಿಯ' ವಿನಾಯಿತಿಗಳು ನಗರವಾಸಿ ಮಧ್ಯಮ ವರ್ಗದ ದುಡಿಯುವ ಮಹಿಳೆಯರನ್ನು ಸರ್ಕಾರದ ಈಗಿನ ಬಂಡವಾಳಶಾಹಿ ಧೋರಣೆಗೆ ಒಲಿಸಿಕೊಳ್ಳುವತ್ತ ನಡೆಯುತ್ತಿರುವ ಪ್ರಯತ್ನಗಳಲ್ಲಿ ಒಂದು.

ಪ್ರಾಮಾಣಿಕ ಉದ್ದೇಶಗಳನ್ನು ಹೊಂದಿದ್ದರೆ, ನಿಜವಾಗಿಯೂ ದುಃಸ್ಥಿತಿಯಲ್ಲಿರುವ ಮಹಿಳೆಯರ ಆರ್ಥಿಕ ನೆರವಿಗೆ ಕ್ರಮಗಳನ್ನು ರೂಪಿಸಬಹುದಾಗಿತ್ತು. ಅಥವಾ ಈ ವಿನಾಯಿತಿ ಒಂದೇ ವರಮಾನ ಇರುವ ಮಹಿಳೆಗೆ ಅಥವಾ ವಿಧವೆಯರಿಗೆ ಮಾತ್ರ ಅನ್ವಯಿಸಬಹುದಿತ್ತು.

ಒಂದಂತೂ ಸ್ಪಷ್ಟ. ಇದು ನಿಜವಾದ ರೀತಿಯಲ್ಲಿ ವಿನಾಯಿತಿಯೇ ಅಲ್ಲ. ಇಂದಿನ ಜೀವನ ಮಟ್ಟದ ವೆಚ್ಚ ನೋಡಿದರೆ ಬಹುಶಃ ಎಂತಹ ನಿಗದಿತ ವರಮಾನ ಹೊಂದಿರುವವರೂ ತೆರಿಗೆ ನೀಡುವ ಶಕ್ತಿ ಹೊಂದಿಲ್ಲ. ಆದುದರಿಂದ ಇಂತಹ 'ಗಿಮಿಕ್' ಗಳು ಜನರ ಮನಸ್ಸನ್ನು ಬೇರೆ ಕಡೆಗೆ ತಿರುಗಿಸುವ ಸಾಧನಗಳಾಗುತ್ತವೆಯಷ್ಟೆ.

ಹೆಚ್. ವಿ. ನಟರಾಜ್
ರಿಜರ್ವ್‌ಬ್ಯಾಂಕ್ ಉದ್ಯೋಗಿ

ಬಜೆಟ್ ವಿನಾಯಿತಿಯು ಮಧ್ಯಮ ವರ್ಗದ ಮಹಿಳಾ ಉದ್ಯೋಗಿಗಳ ದೃಷ್ಟಿಯಿಂದ ಸ್ವಾಗತಾರ್ಹವಾದರೂ ಇದರ ವ್ಯಾಪ್ತಿಯನ್ನು ಎಲ್ಲ ವರ್ಗದ ಮಹಿಳಾ ಉದ್ಯೋಗಿಗಳಿಗೂ ಅನ್ವಯಿಸಿದ್ದರೆ ಮಹಿಳಾ ವರ್ಗಕ್ಕೆ ಒಂದು ವಿಶೇಷ ಕೊಡುಗೆಯಾಗುತ್ತಿತ್ತು. ಈ ಸೌಲಭ್ಯವನ್ನು ಸ್ವಂತ ಉದ್ಯೋಗಿ ಮಹಿಳೆಯರಿಗೆ ಅನ್ವಯಿಸಿದ್ದರೆ ಸ್ವಾವಲಂಬಿ ಮಹಿಳೆಯರಿಗೆ ಉತ್ತೇಜನಕಾರಿಯಾಗುತ್ತಿತ್ತು. ಜೊತೆಗೆ ಇನ್ನೂ ಹೆಚ್ಚು ಮಹಿಳೆಯರು ಉದ್ಯೋಗಸ್ಥರಾಗುವ ಅವಕಾಶವಿರುತ್ತಿತ್ತು. ಈ ರೀತಿಯ ಅಲ್ಪ-ಸ್ವಲ್ಪ ಸೌಲಭ್ಯಗಳು ಮಹಿಳಾ ವಿರೋಧಿಗಳ ನಾಲಿಗೆಗಳಿಗೆ ಮತ್ತಷ್ಟು ಚುರುಕಾದ ಟೀಕೆಗಳಿಗೆ ಆಸ್ಪದವಾದರೂ ಮಹಿಳಾ ಆಂದೋಲನದ ಬೆಂಬಲಿಗರಿಗೆ ಈ ಸ್ವಲ್ಪ ಸೌಲಭ್ಯಗಳು ಸ್ವಾಗತಾರ್ಹ. ಮುಂದೆ ಈ ಸವಲತ್ತುಗಳು ಇತರ ಮಹಿಳಾ ಉದ್ಯೋಗಿಗಳಿಗೂ ದೊರಕಲಿ ಎಂದು ಆಶಿಸೋಣ.

— ಸ್ವರ್ಣಕಲಾ ಜಯರಾಮನ್
ರಿಜರ್ವ್ ಬ್ಯಾಂಕ್ ಉದ್ಯೋಗಿ

 

ದುಡಿಯುವ ಮಹಿಳೆಗೆ ನೀಡಿರುವ ಈ ರಿಯಾಯಿತಿ ಸಮರ್ಥಿಸುವಂಥಾ ಯಾವ ವಿಚಾರಗಳ ಆಧಾರವನ್ನೂ ಹೊಂದಿಲ್ಲ. ಸಂಬಳ ಪಡೆವ ಪ್ರತಿಯೊಬ್ಬರನ್ನೂ ಆದಾಯ ತೆರಿಗೆಯ ಕಾನೂನು ಸಮಾನವಾಗಿ ಕಾಣಬೇಕು.

— ಪ್ರೊ|| ಹೆಚ್. ವಿ. ದ್ವಾರಕಾನಾಥ್

 

ಈ ಯೋಜನೆ ವೈಚಾರಿಕವಾಗಿಲ್ಲ. ನನ್ನ ಅಭಿಪ್ರಾಯದಲ್ಲಿ, ಗಂಡಸರನ್ನೂ ಹೆಂಗಸರಿಗೆ ಸಮಾನವಾಗಿ ಕಾಣಬೇಕು.

—ಡಾ|| ವಿ. ಕುಮುದಿನಿ

 

ದುಡಿಯುವ ಗಂಡು-ಹೆಣ್ಣಿನ ಆದಾಯ ತೆರಿಗೆಯು ಈ ವ್ಯತ್ಯಾಸ ನ್ಯಾಯವಾಗಿ ಕಾಣುವುದಿಲ್ಲ. ಕಾರಣ ಹೆಣ್ಣು ದುಡಿಯುತ್ತಿದ್ದರೆ, ಸಾಮಾನ್ಯವಾಗಿ ಆಕೆಯ ಗಂಡನೂ ದುಡಿಯುತ್ತಿರುತ್ತಾನೆ. ಹಾಗಾಗಿ ಕುಟುಂಬದ ಒಟ್ಟು ಆದಾಯ ಹೆಚ್ಚಿದ್ದು, ಹೆಚ್ಚು ವೆಚ್ಚ ಮಾಡಲು ಸಾಧ್ಯವಿದೆ. ಆದರೆ ದುಡಿಯುವ ಮಹಿಳೆ ಏಕಾಂಗಿಯಾಗಿದ್ದು, ಕುಟುಂಬಕ್ಕೆ ಆಧಾರವಾಗಿದ್ದಲ್ಲಿ ಈ ಆದಾಯ ತೆರಿಗೆಯ ವಿನಾಯಿತಿ ನ್ಯಾಯಸಮ್ಮತ. ಹಾಗಾಗಿ ದುಡಿವ ಮಹಿಳೆ ಏಕಾಂಗಿಯಾಗುವಳೋ ಇಲ್ಲ ವಿವಾಹಿತಳೋ ಎಂಬುದನ್ನು ಈ ರಿಯಾಯಿತಿ ನೀಡುವಾಗ ತೆಗೆದುಕೊಳ್ಳಬೇಕಾದ ಅವಶ್ಯಕತೆ ಇದೆ.

— ಜಗದೀಶ್ ಕುಮಾರ್ ಬಿ.ಜಿ.

 

ನ್ಯಾಯ ಸಮ್ಮತವಾಗಿದೆ, ಕಾರಣ ದುಡಿವ ಮಹಿಳೆಯ ವೆಚ್ಚಗಳು ಅಧಿಕವಿರುತ್ತವೆ. ಕುಟುಂಬದ ಅವಶ್ಯಕತೆಗಳನ್ನು ಭರಿಸಲು ಅವಳು ದುಡಿಯುವ ಅಗತ್ಯವಿದೆ.

— ಸುಗುಣ ಎಂ. ಕುಮಾರ್

ಸಚಿವರು ತೋರಿಸಿರುವ ಈ ಮೂರು ಸಾವಿರ ರೂಪಾಯಿಗಳ ವಿನಾಯಿತಿಯು ಹಿಂದಿರುವ ಉದ್ದೇಶವಾದರೂ ಏನಿರಬಹುದು ?

ಮೊದಲನೆಯದಾಗಿ, ಆದಾಯ ತೆರಿಗೆ ಕಟ್ಟುವ ಮಹಿಳಾ ಉದ್ಯೋಗಿಗಳ ಸಂಖ್ಯೆ ಒಟ್ಟು ಮಹಿಳಾ ವೃಂದ ಪರಿಗಣಿಸಿದಾಗ ಅಷ್ಟೇನೂ ಹೆಚ್ಚಲ್ಲ. ಆದ್ದರಿಂದ ಈ ಸೌಲಭ್ಯ ಸಿಗುವುದು ಬೆರಳೆಣಿಕೆಯ ಶೇಕಡವಾರು ಮಹಿಳೆಯರಿಗೆ ಮಾತ್ರ. ಇವರಿಗಿಂತ ಕಡಿಮೆ ದರ್ಜೆಯ ಉದ್ಯೋಗಗಳಲ್ಲಿ ತೊಡಗಿರುವ ಹೆಚ್ಚಿನ ಸಂಖ್ಯೆಯ ಮಹಿಳೆಯರಿಗೆ ಇದರಿಂದ ಯಾವ ಪ್ರಯೋಜನವೂ ಇಲ್ಲ. ಅಂತೆಯೇ 75 ಸಾವಿರ ರೂಪಾಯಿಗಿಂತ ಹೆಚ್ಚಿನ ಆದಾಯದ ಮಹಿಳೆಯರಿಗೂ ಈ ಸೌಲಭ್ಯ ದೊರೆಯುವುದಿಲ್ಲ. ಬಹುಶಃ ಅಭಿಪ್ರಾಯ ಮುಖಂಡರಂತೆ ವರ್ತಿಸುವ ಮಧ್ಯಮ ದರ್ಜೆಯ ಮಹಿಳೆಯರನ್ನು ವಶೀಕರಿಸಿಕೊಳ್ಳುವ ತಂತ್ರ ಇದಾಗಿರಬಹುದೆ ಎಂಬ ಸಂಶಯ ಕಾಡುತ್ತದೆ. ಇಷ್ಟೊಂದು ಪ್ರಚಾರದಿಂದ ಇವರಿಗೆ ದೊರಕುವ ರಿಯಾಯ್ತಿಯಾದರೂ ಎಷ್ಟು ? ಲೆಕ್ಕಾಚಾರದ ತಾಳೆಯಂತೆ ಬಹುಮಟ್ಟಿಗೆ ಒಂದು ಹಂತದಲ್ಲಿ 600 ರೂಪಾಯಿ. ಅಂದರೆ ತಿಂಗಳಿಗೆ 50 ಅಥವಾ 75 ರೂಪಾಯಿ ಈ ಹಂತದ ಉದ್ಯೋಗಿಗಳಿಗೆ ಇದು ಲೆಕ್ಕಕ್ಕೆ ಬಾರದ ಮೊತ್ತ. ಒಂದು ತುಣಕು ರೊಟ್ಟಿ ಎಸೆದಂತೆ. ಏನೋ ಅಂತಿಮ ಉದ್ದೇಶದಿಂದ ಮಹಾ ದೊಡ್ಡ ಕೊಡುಗೆ ಎಂಬಂತೆ ಇದನ್ನು ಕೊಡದಿದ್ದರೆ ಚೆನ್ನಾಗಿತ್ತೇನೋ !

— ನಾಗಮಣಿ ಎಸ್. ರಾವ್

 

ದುಡಿಯುವ ಮಹಿಳೆಯರಿಗೆ ದೊರೆತಿರುವ ವಿನಾಯ್ತಿಯಿಂದ ಯಾರೂ ಅಸಮಧಾನ ಪಟ್ಟುಕೊಳ್ಳುವ ಅಗತ್ಯವಿಲ್ಲ, ಕೊಡಲಿ, ಬಿಡಿ....ಈ ದೇಶದಲ್ಲಿ ಸಂಘಟಿತ ಕ್ಷೇತ್ರದಲ್ಲಿರುವ ದುಡಿಯುವ ಮಹಿಳೆಯರ ಸಂಖ್ಯೆಯಾದರೂ ಏನು ಮಹಾ............

— ರಾಜು
ಪತ್ರಕರ್ತ

 

ಈಚೆಗೆ ಕೇಂದ್ರ ಸರ್ಕಾರದ ಬಜೆಟ್‌ನಲ್ಲಿ ಅನೇಕರ ಗಮನ ಸೆಳೆದಿರುವ ಮಹಿಳೆಯರಿಗೆ ನೀಡಿದ ತೆರಿಗೆ ವಿನಾಯಿತಿ ಹೊರ ನೋಟಕ್ಕೆ ದೊಡ್ಡ ರಿಯಾಯಿತಿಯೊಂದನ್ನು ಸರ್ಕಾರ ನೀಡಿದೆ ಎಂಬ ಭಾವನೆ ತರುತ್ತದಾದರೂ, ವಾಸ್ತವದಲ್ಲಿ ಕೇವಲ ಅತ್ಯಲ್ಪ ಮಂದಿಗೆ ಅನ್ವಯವಾಗುವ ಸಂಗತಿ ಇದಾಗಿದೆ. ಮಹಿಳಾ ಉದ್ಯೋಗಿಗಳೇ ಸಾಕಷ್ಟಿಲ್ಲದ ನಮ್ಮ ದೇಶದಲ್ಲಿ ತೆರಿಗೆ ವ್ಯಾಪ್ತಿಗೆ ಬರುವವರ ಸಂಖ್ಯೆಯೋ ಬಹಳ ಕಡಿಮೆ. ಇನ್ನೂ ತೆರಿಗೆ ವ್ಯಾಪ್ತಿಗೆ ಬರುವ ಮಹಿಳಾ ಉದ್ಯೋಗಿಗಳಲ್ಲೂ ಸಾಕಷ್ಟು ಮಂದಿ ಗರಿಷ್ಠಮಿತಿ 75,000/– ರೂಗಳ ಆದಾಯ ಮೀರಿದವರಾದ್ದರಿಂದ ಅವರಿಗೆ ಈ ರಿಯಾಯಿತಿ ಸಿಕ್ಕುವುದಿಲ್ಲ, ಹೀಗಾಗಿ ಎಲ್ಲೋ ಕೆಲವರಿಗೆ ಅತ್ಯಲ್ಪ ಮಂದಿಗೆ ಸಿಗುವ ಈ ಕಿರು ಸೌಲಭ್ಯ ಕೇವಲ ಒಂದು ಪ್ರಚಾರತಂತ್ರ ಆಗಿದೆ ಎನ್ನುವುದು ನನ್ನ ಅನಿಸಿಕೆ.

ಆದರೆ ಸರ್ಕಾರ ತೋರಿಸಿರುವ ಈ ಅತ್ಯಲ್ಪ ರಿಯಾಯ್ತಿಯನ್ನೂ ಕೆಂಗಣ್ಣಿನಿಂದ ನೋಡುತ್ತಿರುವ ಪುರುಷ ನೌಕರ ವರ್ಗವೂ ಭಾವನಾತ್ಮಕವಾಗಿ ಬದಲಾವಣೆಗೊಳ್ಳುವತನಕ ಇಂತಹ ರಿಯಾಯ್ತಿಗಳಿಗೆ ಸಾಮಾಜಿಕ ಮಹತ್ವ ಲಭಿಸುವುದಿಲ್ಲ.

—ಎಂ. ಆರ್. ಲಕ್ಷ್ಮೀದೇವಿ
ಕನ್ನಡ ವಿಭಾಗದ ಮುಖ್ಯಸ್ಥರು
ಆಚಾರ್ಯ ಪಾಠಶಾಲಾ
ವಾಣಿಜ್ಯ ಕಾಲೇಜು
ಬೆಂಗಳೂರು–5600 19

 

ಇತ್ತೀಚಿನ ಬಜೆಟ್‌ನಲ್ಲಿ ಕೇಂದ್ರ ಸರ್ಕಾರ ಉದ್ಯೋಗಸ್ಥ ಮಹಿಳೆಯರಿಗಾಗಿ ಮೂರುಸಾವಿರರೂ ವರೆಗೆ ತೆರಿಗೆ ವಿನಾಯ್ತಿಯ ವಿಶೇಷ ಸವಲತ್ತನ್ನು ಪ್ರಕಟಿಸಿದ್ದೇ ಹಲವಾರು ಪುರುಷರನ್ನು ದಿಕ್ಕುಗೆಡಿಸಿರುವಂತಿದೆ. ಕೆಲವರು ಸ್ತ್ರೀ-ಪುರುಷರ ನಡುವಿನ ಈ ತಾರತಮ್ಯ ಅಸಮಾನತೆಯನ್ನು ಹೆಚ್ಚಿಸುವ ಕ್ರಮವೆಂದೂ, ಇಂಥಾದ್ದನ್ನು ಪುರುಷರೆಲ್ಲರೂ ಸೇರಿ ವಿರೋಧಿಸಬೇಕೆಂದೂ ಹೇಳುತ್ತಿದ್ದಾರೆ.

ನಮ್ಮ ಸಂವಿಧಾನವು ಹಿಂದುಳಿದ ಜನಾಂಗ, ಮಹಿಳೆಯರು ಮತ್ತು ಮಕ್ಕಳಿಗಾಗಿ ಹೆಚ್ಚಿನ ಸೌಲಭ್ಯ, ರಿಯಾಯ್ತಿ, ಆದ್ಯತೆ, ಮೀಸಲಾತಿಗಳನ್ನು ಕಲ್ಪಿಸಲು ಬದ್ಧವಾಗಿದ್ದು ಅಸಮಾನತೆಯ ವಿರುದ್ಧ ಕೈಗೊಳ್ಳುವ ಕ್ರಮಗಳಲ್ಲಿ ಇದೇ ಮೊದಲ ಮೆಟ್ಟಿಲಾಗಿರುತ್ತದೆ. ನಮ್ಮ ಜನಾಂಗದ ಅರ್ಧ ಸಂಖ್ಯೆಯಷ್ಟಿರುವ ಮಹಿಳೆಯರಿಗೆ ಸರ್ಕಾರದ ಒಟ್ಟು ಉದ್ಯೋಗದ ಅವಕಾಶಗಳಲ್ಲಿ ದೊರೆತಿರುವುದು ಶೇ. 5 ಕ್ಕಿಂತ ಕಡಿಮೆ. ಹೀಗಿರುವಾಗ ಪುರುಷರು ಅಸಮಾನತೆಯ ವಿರುದ್ಧ ಮಾತನಾಡುವುದಾದರೆ, ಎಲ್ಲಾ ಇಲಾಖೆ ಕ್ಷೇತ್ರಗಳಲ್ಲೂ ಸ್ತ್ರೀಯರ ಉದ್ಯೋಗವಕಾಶ ಪುರುಷರ ಸಂಖ್ಯೆಗೆ ಸಮಾನವಾಗುವ ವರೆಗೂ ಪುರುಷರನ್ನು ಅಭ್ಯರ್ಥಿಗಳೆಂದು ಪರಿಗಣಿಸಬಾರದುಎಂದಲ್ಲಿ ಅದಕ್ಕೆ ಸಿದ್ಧರಾಗಬಲ್ಲರೆ? ಅಂಥ ಸಮಾನತೆ ಸಾಧಿಸಿದ್ದಾರೆ ಆಗ ಅವರು ಹೇಳುವಂತೆ ಮೀಸಲಾತಿ, ವಿನಾಯ್ತಿ ಎಲ್ಲ ಬೇಡವೆನ್ನಬಹುದು. ಅಲ್ಲಿಯವರೆಗೆ ಮಹಿಳೆಯರು ತಮ್ಮ ಸವಲತ್ತುಗಳನ್ನು, ಸಂವಿಧಾನದತ್ತ ಹಕ್ಕುಗಳು ಪಡೆಯಲು ಧೈರ್ಯವಾಗಿ ಮುನ್ನಡೆಯುವುದೊಂದೇ ದಾರಿ. ಎಂದು ನನ್ನ ಅಭಿಪ್ರಾಯ.

ವೈ. ಎನ್. ಆರ್.
ಹೆಚ್. ಎ. ಎಲ್. ಕಾರ್ಮಿಕರು




ಬಜೆಟ್ ರಿಯಾಯಿತಿ ಯಾರಿಗೂ ಲಾಭದಾಯಕವಲ್ಲ. ಅನಗತ್ಯವಾಗಿ ಮಹಿಳೆಯರ ಮನದಲ್ಲಿ 'ಏನೋ ಸೌಲಭ್ಯ ಸಿಕ್ಕಿಬಿಟ್ಟಿದೆ' ಎಂಬ ಭಾವನೆ ಮೂಡಿಸುವುದು ಇದಾಗಿದೆ. ದೊರೆತಿರುವ ರಿಯಾಯಿತಿ ಮಾತ್ರ ಅತ್ಯಲ್ಪ. ಅದೂ ಕೆಲವು ಮಹಿಳೆಯರಿಗೆ ಮಾತ್ರ. ದುಡಿಯುವ ಕ್ಷೇತ್ರದಲ್ಲಿ ಇರುವ ಮಹಿಳೆಯರ ಸಂಖ್ಯೆ ಅತ್ಯಲ್ಪ. ಅದರಲ್ಲಿಯೂ ತೆರಿಗೆ ವ್ಯಾಪ್ತಿಗೆ ಬರುವವರ ಸಂಖ್ಯೆ ಇನ್ನೂ ಕಡಿಮೆ. ಕೊಟ್ಟ ಸೌಲಭ್ಯ ಎಲ್ಲ ವರ್ಗದ ದುಡಿಯುವ ಮಹಿಳೆಯರಿಗೆ ಅನ್ವಯಿಸಬೇಕಾಗಿತ್ತು. ಉದ್ಯೋಗಸ್ಥ ಮಹಿಳೆಯರಲ್ಲಿ ತಾರತಮ್ಯ ಮಾಡಿದುದು ಸರಿಯಲ್ಲ.

— ತಾರ




ಮಹಿಳಾ ಉದ್ಯೋಗಿಗಳಿಗೆ ರಿಯಾಯಿತಿ ಕೊಟ್ಟದ್ದು ಸರಿಯಲ್ಲ. ಉದ್ಯೋಗ ಕ್ಷೇತ್ರದಲ್ಲಿನ ಮಹಿಳೆಯರಿಗೆ ಪ್ರೋತ್ಸಾಹ ನೀಡಲು ಹಾಗೂ ದುಡಿಮೆ ರಂಗಕ್ಕೆ ಹೆಚ್ಚು ಮಹಿಳೆಯರನ್ನು ಆಕರ್ಷಿಸಲು ಈ ರಿಯಾಯಿತಿ ತೋರಿರಬಹುದು. ಆದರೆ ಮಹಿಳೆಯರಿಗೇಕೆ ಈ ರಿಯಾಯಿತಿ ? ಪುರುಷರಿಗೇಕೆ ಬೇಡ? ನಮ್ಮಲ್ಲಿ ಅನೇಕ ಮನೆಗಳಲ್ಲಿ ಪುರುಷ ಮಾತ್ರ ದುಡಿಮೆ ಇಡೀ ಕುಟುಂಬವನ್ನು ನೋಡಿಕೊಳ್ಳುತ್ತಾನೆ. ಸ್ತ್ರೀ ದುಡಿವ ಮನೆಗಳಲ್ಲಿ ಸಾಮಾನ್ಯವಾಗಿ ಸ್ತ್ರೀ-ಪುರುಷರಿಬ್ಬರೂ ನೌಕರಿಯಲ್ಲಿರುತ್ತಾರೆ. ಏಕಾಂಗಿಯಾಗಿ ದುಡಿಯುವ ಪುರುಷನಿಗೆ ಏನೂ ಸವಲತ್ತುಗಳಿಲ್ಲ. ಆದರೆ ದಂಪತಿ ದುಡಿವಾಗ ಹೆಣ್ಣಿಗೆ ಮಾತ್ರ ಈ ಸೌಲಭ್ಯ. ಏಕೆ ಈ ತಾರತಮ್ಯ ?

— ಗಿರೀಶ್




## ಪುಸ್ತಕ ವಿಮರ್ಶೆ

# ಎರಡು ಕವನ ಸಂಕಲನಗಳು

ಬಿ. ಎಸ್. ವಿಜಯಲಕ್ಷ್ಮಿ

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕಾವ್ಯಕ್ಕೆ ವಸ್ತುವಾಗುತ್ತಿದ್ದಂತಹ ಉಪಮೆ, ಪ್ರತಿಮೆಗಳಾಗುತ್ತಿದ್ದಂತಹ ಅಂಶಗಳಿಗೂ ಈಗಿನ ಸಾಮಗ್ರಿಗಳಿಗೂ ಇರುವ ಅಂತರ ನನಗೆ ಯಾವಾಗಲೂ ಕುತೂಹಲವನ್ನು ಮೂಡಿಸುತ್ತದೆ. ಅಂಚೆಡಬ್ಬಿ, ಕಸದಬುಟ್ಟಿ, ತಿಪ್ಪೆಯಂತಹ ವಸ್ತುಗಳನ್ನೂ ಆಧರಿಸಿ ಕವನ ರಚಿಸುವ ಕವಿಗಳಿದ್ದಾರೆ. ವಸಂತ ಕಲ್‌ಬಾಗಲ್ ಅವರ ಕವನಗಳ ವಸ್ತುಗಳೂ ಅಂತೆಯೇ ನಮಗೆ ಚಿರಪರಿಚಿತವಾದದು. ಚೆಂಡು, ಬಣ್ಣ, ಕುರ್ಚಿ, ಪಾಟ್‌ಗನ್, ಟಾನಿಕ್‌ಗಳೂ ಇವರ ಕವನ ಸಂಕಲನದಲ್ಲಿ ಸ್ಥಾನ ಪಡೆದುಕೊಂಡಿರುವುದು ಕವಿ ಹೇಗೇ ಸಾಮಾನ್ಯ ಸಾಮಾಗ್ರಿಗಳಲ್ಲೂ ಅಸಮಾನ್ಯತೆಯನ್ನು ಕಾಣಲು ಯತ್ನಿಸಿದ್ದಾರೆನ್ನುವುದಕ್ಕೆ ಸಾಕ್ಷಿಯಾಗುತ್ತದೆ. ಈ ದಿಕ್ಕಿನಲ್ಲಿ ಪೂರ್ಣಿಮಾ ಅವರಿಗಿಂತ ಭಿನ್ನರಾಗುತ್ತಾರೆ.

> 'ಪ್ರಮದ'—ವಸಂತಕಲ್‌ಬಾಗಲ್
> ಜೇನುಗೂಡು ಪ್ರಕಾಶನ
> ಬೆಂಗಳೂರು–9.

ಸಮಕಾಲೀನ ಸಂಗತಿಗಳಿಗೆ ಸ್ಪಂದಿಸುವ ಸಂವೇದನೆ ಹೊಂದಿರುವ ವಸಂತ ಅವರು ತಮಗೆ ಅನ್ನಿಸಿದ್ದನ್ನು ನಿರ್ಭಿಡೆಯಿಂದ ಹೇಳಬಲ್ಲರು. ಬರವಣಿಗೆಯಲ್ಲಿ ಈ ದಿಟ್ಟತನ ಈಗಾಗಲೇ ಬರಹಗಾರ್ತಿಯರಿಗೆ ಸುಲಭವಾಗಿರುವ ಸಂಗತಿಯಾಗಿದೆ. ನೀಳ್ಗಗ್ಗ, ಚೆಂಡುಗಳು, ಮಧುಪ, ಹೀಗೊಂದು ಚಿಂತೆ ಕವನಗಳು ಕವಿ ಹೇಗೆ ಮುಕ್ತವಾಗಿ ಮಾತನಾಡಬಲ್ಲರೆಂಬುದಕ್ಕೆ ದ್ಯೋತಕವಾಗಿವೆ.

ಆದರೆ ಮುಕ್ತ ಅಭಿವ್ಯಕ್ತಿಯೇ ಕವನವಾಗುವುದಿಲ್ಲ. ಆ ದಿಸೆಯಲ್ಲಿ ಗಾಳಿಗೋಪುರ, ಪ್ರಕೃತಿ–ಸ್ಪಂದನ, ಈ ಶತಮಾನದವಳು, ಪ್ರಮದ, ಶಿಸ್ತಾಸನ, ಮೊದಲಾದ ಕವನಗಳು ಕವಿಗೆ ಹೇಗೆ ಮಾರ್ಗದರ್ಶಕವಾಗಬಲ್ಲದು, ಬಣ್ಣ ಬಣ್ಣದ ಕನಸು ಕಾಣುತ್ತಾ ಕುಳಿತವಳಿಗೆ ಕಠೋರ ವಾಸ್ತವದ ಪರಿಚಯವನ್ನು ಮಾಡಿಕೊಡುವ

ಪೊದೆಯ ಹಿಂದೆ ಸದ್ದಾಗಿ । ಬೆಚ್ಚಿ ತಿರುಗಿದಾಗ
ಚಿಗುರು ಎಲೆಗಳ ಹಿಂದೆ । ನಾಯಿಗಳೆರಡು ।
ಕುಳಾಗುಡುತ್ತಿದ್ದವು (ಗಾಳಿ ಗೋಪುರ)

ಎಂಬ ಸಾಲುಗಳು ಪ್ರೇಮದ ಒಂದು ಮುಖವನ್ನು ಕಾಣಿಸುವ 'ಪ್ರಮದ' ಕವನದ

ಸಮಾಜ ನಿನ್ನನ್ನು । ಮನಸಿಜನನ್ನಾಗಿ
ವಶೀಕರಿಸಿದ ನಾನು । ಪ್ರಮದ

ಎಂಬ ಸಾಲುಗಳು, ಎರಡು ತಲೆ ಮಾರಿನ ಅಂತರವನ್ನು ಅಭಿವ್ಯಕ್ತಿಸುವ 'ಶಿಸ್ತಾಸನ' ಕವನದ

ತೂಕಡಿಸಲೂ ಆಗದ ಈ ಮೋಟು ಬೆನ್ನಿನ ಶಿಸ್ತಾಸನದಲ್ಲಿ ಹಿಡಿದಿಡಲಾದೀತೇ ಹಗಲುಗನಸು ಕಾಣುವ ನನ್ನ ಮನಸ್ಸನ್ನು ಎಂಬಂತಹ ಸಾಲುಗಳು ಕವನಗಳನ್ನು ಧ್ವನಿಪೂರ್ಣವೆನಿಸಬಲ್ಲದು. ಕಾವ್ಯದ ಈ ರಹಸ್ಯವನ್ನು (ಧ್ವನಿಪೂರ್ಣವಾಗಿಸುವ) ಅರಿಯದೇ ಬರೆದಿರುವ ಮತ್ತೆ ಬಂದಿತೇ ಹಬ್ಬ, ಕಲಿಯುಗದ ಧರ್ಮ, ಕಿವಿಮಾತು ಕವನಗಳು ವಾಚ್ಯವಾಗಿಯೂ, 'ಏನೇ ಏನ್ಸಮಾಚಾರ' ಕವನ ವಾಚಾಳಿಯಾಗಿಯೂ ಅರ್ಥ ಸ್ವಾರಸ್ಯವನ್ನು ಕಳೆದುಕೊಂಡುಬಿಡುತ್ತದೆ.

ಅಭಿವ್ಯಕ್ತಿಯ ಕ್ರಮದಲ್ಲಾಗಲೀ ವಸ್ತುವಿನ ಆಯ್ಕೆಯಲ್ಲಾಗಲೀ ವಸಂತ ಅನನ್ಯರಾಗಿದ್ದಾರೆ, ವಿವಿಧತೆಯಲ್ಲೂ, ಏಕತೆಯನ್ನು ಸಾರುವ 'ಬಣ್ಣದ ಕತೆ' 'ಗಾರ್ಬಿಗೊಂದು ಸಾನೆಟ್', ಸತ್ತ ಶಿಶುವನ್ನು ಕುರಿತು ಬರೆದ 'ಎಕ್ಸ್ಟ್ರಾ ಟೆರೆಸ್ಟ್ರಿಯಲ್' ಮೊದಲಾದ ಕವನಗಳು ಅದಕ್ಕೆ ದ್ಯೋತಕವಾಗಿವೆ. ಆದರೆ ಕಾವ್ಯದಲ್ಲಿರಬೇಕಾದ ವ್ಯಂಗ್ಯಾರ್ಥಕ್ಕೆ ಒತ್ತು ಸಿಗದೇ ಅವುಗಳು ಬರಿಯ ಹೇಳಿಕೆಗಳಾಗಿಬಿಟ್ಟಿವೆ.

ನಿಸ್ಸಂಕೋಚ, ನಿರ್ಭೀತಿಗಳು ಸ್ವಾಗತಾರ್ಹವಾದರೂ ಅಷ್ಟರಿಂದಲೇ ಉತ್ತಮ ಕವನಗಳು ಸೃಷ್ಟಿಯಾಗಲಾರವು. ಈ ದಿಸೆಯಲ್ಲಿ ನೋಡಿದಾಗ ಈ ಶತಪಥಾನಗಳು, ಪ್ರಮದ, ಗಾಳಿಗೋಪುರ, ಅ–ಮರ ಪ್ರೇಮ ಮೊದಲಾದವು ಕಾವ್ಯ ಮಾಧ್ಯಮದ ಮೇಲೆ ಕವಿಗಿರುವ ಹಿಡಿತವನ್ನು ತೋರಿಸುತ್ತವೆ. ಇದನ್ನು ಪೂರ್ಣ ಪ್ರಮಾಣದಲ್ಲಿ ಸಾಧಿಸಿಕೊಂಡು ಹೋದರೆ ವಸಂತ ಅವರು ಕನ್ನಡದ ಮತ್ತೊಬ್ಬ ಉತ್ತಮ ಕವಿಯಾಗಬಲ್ಲರು ಎನಿಸುತ್ತದೆ.

## "ನೋವಿನಲ್ಲೂ ನಲಿವುಂಡ"........

ವಿಷಾದ, ಅನುಕಂಪ, ಪ್ರೇಮಾಸಕ್ತಿ, ಅನುಮಾನ, ಆತಂಕ, ಮೊದಲಾದ ಭಾವನೆಗಳಿಂದ ಕೂಡಿದ ಕವನಗಳನ್ನು ಕಾಣಬಹುದಾದ ಟಿ. ಸಿ. ಪೂರ್ಣಿಮಾ ಅವರ 'ಹಾದಿಬದಿಯ ಹದಿಬದೆ' ಸಂಕಲನದಲ್ಲಿ ಹೂವು, ಬೆಳದಿಂಗಳು, ಇಬ್ಬನಿ, ಕಾಮನಬಿಲ್ಲು, ಮೋಡವೇ ಮೊದಲಾದ ಸೃಷ್ಟಿಯ ವಿವಿಧ ಅಂಗಗಳು ಪ್ರತಿಮೆಯಾಗಿಯೋ ಸಂಕೇತಗಳಾಗಿಯೋ ಬಳಕೆಯಾಗಿರುವುದನ್ನು ನೋಡಿದಾಗ ಕವಿ ಸುಕುಮಾರತೆಯನ್ನು ಹೆಚ್ಚು ಮೆಚ್ಚುತ್ತಾರೆ ಎನಿಸುತ್ತದೆ. ಸುಖ, ಸಂತೋಷದ ಅಪೇಕ್ಷೆ ಇಲ್ಲಿ ತುಂಬಿಕೊಂಡಿದೆ. ಮಣ್ಣೆಂಬ ಹೆಣ್ಣಿನ ಸಹನಾಶೀಲತೆಯ ಬಗ್ಗೆ ತುಂಬ ಅಭಿಮಾನ ತಳೆದಿರುವ ಕವಿ ಎಲ್ಲಿಯೂ ಕಾಣುವುದು 'ನೋವಿನಲ್ಲೂ ನಲಿವುಂಡ ಸುಖವನ್ನು' (ಮಣ್ಣ ಮುಖಗಳು)

ಈ ಅಪೇಕ್ಷೆ ಪ್ರೇಮದ ಕಡೆಗೂ ತಿರುಗುತ್ತದೆ. ಬಹಿರಂಗದಲ್ಲಿ 'ಗರ್ವನಿಸಂವ ಮೌನವಿದ್ದರೂ' (ಗೆಳೆಯನಿಗೆ) ಅಂತರಾಳದ ಕಡಲಿನ ಭೋರ್ಗರೆತ ಮೊರೆಯುವುದು 'ಪ್ರೇಮ ಸಂಭೆಗಾಗಿಯೇ' (ಮೋಡವಾಗಲಾರೆಯಾ ?), ಹೃದಯವಿನ್ನು ಎಚ್ಚರ, ಕೆಂಪುದೀಪದ ಹುಡುಗಿ, ನಲ್ಲನಿಲ್ಲವಲ್ಲ, ಇಬ್ಬನಿಯ ಕಂಬನಿ ಮೊದಲಾದ ಕವನಗಳು ಧ್ವನಿಸುವುದೂ ಇದನ್ನೇ. ಇವನ್ನು ನೋಡಿದರೆ ಈ ಕವನ ಸಂಕಲನದ ಸ್ಥಾಯಿ ಒಲವಿಗಾಗಿ ಹಂಬಲಿಸುವುದೇ ಆಗಿದೆ ಎನ್ನಿಸುತ್ತದೆ.

**ಹಾದಿಬದಿಯ ಹದಿಬದೆ**
**ಟಿ. ಸಿ. ಪೂರ್ಣಿಮಾ.**
**ಲಿಪಿ ಪ್ರಕಾಶನ**
**ಬೆಂಗಳೂರು-4**

'ಹಾದಿಬದಿಯ ಹದಿಬದೆ' ಒಂದು ಒಳ್ಳೆಯ ಕವನವಾಗಿದ್ದರೂ ಭಾಷೆ, ಭಾವ, ಲಯವನ್ನು ಹೊಂದಿಕೊಂಡು ಪ್ರತಿಮಾ ವಿಧಾನದ ಮೂಲಕ ಅಭಿವ್ಯಕ್ತವಾಗಿರುವ 'ಅನಾಥಾಶ್ರಮದ ಹುಡುಗಿಯರು' ಈ ಸಂಕಲನದ ಉತ್ತಮ ಕವನವೆಂದು ನನ್ನ ಅನಿಸಿಕೆ. ಹೂವನ್ನೇ ಪ್ರತಿಮೆಯಾಗಿ ಮಾಡಿಕೊಂಡಿರುವ ಈ ಕವನ ಒಂದು ಹತಾಶ ಜೀವನದ ಪರಿಚಯವನ್ನು ಚಿತ್ರವತ್ತಾಗಿ ಮಾಡಿಕೊಡುತ್ತದೆ.

ಎದೆಯ ಹೊಂಗನಸನೆಲ್ಲ !
ವಿಧಿಯ ಹೋಮಾಗ್ನಿಗಿತ್ತು
ನಿಸರ್ಗ ದೇವಿಗಾಹುತಿ ನೀಡುತ್ತವೆ !
ಮೆಲ್ಲನೆ ಮಣ್ಣಿಗುರುಳುತ್ತವೆ,

ಎಂಬ ಮಾತುಗಳಲ್ಲಿರುವ ವಿಷಾದ ಮೌನವಾಗಿಯೇ ಮನ ತಟ್ಟುತ್ತದೆ, ಇಲ್ಲಿಯೂ ಕವನದ ಆಶಯ ಪ್ರೀತಿಯಿಂದ ಬದುಕನ್ನು ಸಫಲ ಮಾಡಬಹುದೆಂಬುದೇ ಆಗಿದೆ.

ಬದುಕಿನ ಅನೇಕ ಮುಖಗಳನ್ನು ಕಾಣುವ 'ಕಣ್ಣಿರುವ ಕವಿ' ಹಾಸಿಗೆ ಇರುವಷ್ಟೇ ಕಾಲು ಚಾಚುವುದೇ ರಕ್ಷೆ' (ಹಾಸಿಗೆ ಇರುವಷ್ಟು) ಎಂಬ ಅಲ್ಪ ತೃಪ್ತಿಯನ್ನು ವ್ಯಕ್ತಪಡಿಸುತ್ತಲೇ ಹುಣ್ಣಿಮೆಯನ್ನೇ ತಬ್ಬುವ ಗಾಳಿ ಪಟವಾಗಿ ಹಾರುವ ಆಕಾಂಕ್ಷೆಯನ್ನೂ ಕಾಣಿಸುತ್ತಾರೆ. ಇದರಲ್ಲಿ ಯಾವುದು ನಿಜ ? ಎಂಬ ಪ್ರಶ್ನೆಯೇಳುತ್ತದೆ. ಇಂತಹ ಸಂದಿಗ್ಧ ಜ್ವಾಲಾಮುಖಿ, ಶೋಧ ಕವನಗಳಲ್ಲೂ ಕಾಣುತ್ತದೆ. 'ಜ್ವಾಲಾಮುಖಿ' ಒಂದು ಭಾವಗೀತೆ ಯಂತಹ ಕವನವಾದರೂ ತೇಲುತಿಹುದೇ ಸೋಲುತಿಹುದೆ ಎಂಬ ಸಂಶಯಾತ್ಮಕವಾದ ನುಡಿಗಳಿಂದ ಕವಿಯ ನಿಲುವು ಏನು ಎನ್ನುವುದನ್ನು ತಿಳಿಯುವುದು ಕಷ್ಟವಾಗುತ್ತದೆ.

ಕೆಲವು ಕವನಗಳಲ್ಲಿ ಮಾತಿನ ಜೋಡಣೆಯಲ್ಲಿ ಗದ್ಯದ ಧಾಟಿ ಅಲ್ಲಲ್ಲಿ ನುಸುಳುವುದರಿಂದಾಗಿ ಕಾವ್ಯದ ಬಂಧ ಶಿಥಿಲವಾಗಿಬಿಟ್ಟಿದೆ. ಉದಾ ; ಶೋಧ, ಆತ್ಮ ಕಥನ, ಇತ್ಯಾದಿ. 'ಕಣ್ಣ ತಬ್ಬಲು ರಪ್ಪೆ' ಎಂಬ ಕವನದ ಕೊನೆಯ ನುಡಿ, ಎದೆಯ ಭಾವಗಳೆಲ್ಲಾ...... ಮೊದಲ ಮೂರು ನುಡಿಗಳ ಅರ್ಥವನ್ನು ಹಿಡಿದಿರಿಸಿ ಅವು ಅನಗತ್ಯ ಎನಿಸುವಂತೆ ಮೂಡುತ್ತವೆ, ಕವನದ ಯಾವುದೇ ಒಂದು ಸಾಲನ್ನು ತೆಗೆದರೂ ಇಡೀ ಕವನವೇ ಕುಸಿದು ಬೀಳುತ್ತದೆ ಎನಿಸುವಂತಹ ಬಿಗಿಯನ್ನು ಸಾಧಿಸಿ ಕೊಳ್ಳಬೇಕಾದ ಅಗತ್ಯ ಕವಿಗಿದೆ. ಕವನಗಳಿಗಿರಬೇಕಾದ ಒಳಲಯವೊಂದು ಇಲ್ಲಿ ಅಪರೂಪವಾಗಿ ಕಾಣಿಸುತ್ತದೆ. ಉದಾ : 'ಅನಾಥಾಶ್ರಮದ ಹುಡುಗಿಯರು' 'ಹೃದಯ ವಿನ್ನು ಎಚ್ಚರ' ಇತ್ಯಾದಿ.

ಗೊ. ರು. ಚನ್ನಬಸಪ್ಪ ಅವರು ಗಮನಿಸಿರುವಂತೆ ಟಿ. ಸಿ. ಪೂರ್ಣಿಮಾ ಅವರು ಎಲ್ಲಿಯೂ ಉದ್ವೇಗಕ್ಕೆ ಒಳಗಾಗಿಲ್ಲ. ಪ್ರಾಯಶಃ ಆ ಭಾವ ತೀವ್ರತೆಯ ಕೊರತೆ ಯಿಂದಾಗಿಯೇ ಕವನದ ಶಿಲ್ಪ ಸಡಿಸಲಾಗಿದೆಯೇ ಎನಿಸುತ್ತದೆ. ಹೆಚ್. ಎಸ್. ವೆಂಕಟೇಶ್‌ಮೂರ್ತಿ ಯವರು ಸೂಚಿಸಿರುವಂತೆ ಕವಿತೆಗೆ ಒದಗಿ ಬರುವ ನಾವೀನ್ಯವನ್ನು ಪ್ರಾಪ್ತಿ ಮಾಡಿಕೊಂಡು ಭಾವವನ್ನು ಭಾಷೆ ಮತ್ತು ಲಯಕ್ಕೆ ಒಗ್ಗಿಸಿಕೊಳ್ಳುವಲ್ಲಿ ಎದುರಾಗುವ ತೊಡಕನ್ನು ನಿವಾರಿಸಿಕೊಂಡರೆ ಪೂರ್ಣಿಮಾ ಅವರು ಭರವಸೆಯನ್ನು ಮೂಡಿಸುವ ಕವಿಯಾಗಬಲ್ಲರು.



---

**ಕಾನೂನು ಸಲಹೆ**

## ದತ್ತು ಸ್ವೀಕಾರಕ್ಕೆ ಅವಕಾಶ

**ಹೇಮಲತಾ ಮಹಿಷಿ**

ಪ್ರಶ್ನೆ : ಅವಿವಾಹಿತ ಮಹಿಳೆಯರಿಗೆ ಮಕ್ಕಳನ್ನು ದತ್ತು ತೆಗೆದುಕೊಳ್ಳಲು ಇರುವ ಕಾನೂನಿನ ಅವಕಾಶಗಳೇನು ?

ಉ : ಮಕ್ಕಳನ್ನು ದತ್ತು ತೆಗೆದುಕೊಳ್ಳಲು ಅವಕಾಶವಿರುವುದು ಹಿಂದೂ ಕಾನೂನಿನಲ್ಲಿ ಮಾತ್ರ. 1956ರ ಹಿಂದೂ ದತ್ತಕ ಅಧಿನಿಯಮ ಜಾರಿಗೆ ಬರುವ ಮೊದಲು ಮಹಿಳೆಯರಿಗೆ ತಾವೇ ದತ್ತು ತೆಗೆದುಕೊಳ್ಳಲು ಅವಕಾಶ ವಿರಲಿಲ್ಲ. 1956 ರ ನಂತರ ಅವಿವಾಹಿತ ಮಹಿಳೆಯರಿಗೆ, ವಿಚ್ಛೇದನ ಪಡೆದ ಮಹಿಳೆಯರಿಗೆ, ವಿಧವೆ ಯರಿಗೆ ತಮ್ಮ ಹೆಸರಿನಲ್ಲಿಯೇ ತಮಗಾಗಿ ಮಕ್ಕಳನ್ನು ದತ್ತು ತೆಗೆದುಕೊಳ್ಳಲು ಅವಕಾಶವಿದೆ.

ಪ್ರಶ್ನೆ : ಅವಿವಾಹಿತ ಮಹಿಳೆಯೊಬ್ಬಳು ಮಕ್ಕಳನ್ನು ದತ್ತು ತೆಗೆದುಕೊಂಡರೆ ನಂತರ ಮದುವೆಯಾಗುವ ಅವಕಾಶ ದೊರೆತರೆ ಮದುವೆಯಾಗಲು ಬರುತ್ತದೆಯೇ ?

ಉ : ಅವಿವಾಹಿತ ಮಹಿಳೆ ಮಕ್ಕಳನ್ನು ದತ್ತು ತೆಗೆದುಕೊಂಡ ನಂತರ ವಿವಾಹವಾಗಲು ಕಾನೂನಿನಲ್ಲಿ ಯಾವ ಅಡ ತಡೆಯೂ ಇಲ್ಲ. ಆದರೆ ಅವಳ ಪತಿಯು ಆ ಮಗುವಿಗೆ ತಂದೆಯಾಗುತ್ತಾನೆ ಎಂದು ಕಾನೂನು ದತ್ತು ತಿಳಿಸುತ್ತದೆ. ಎಂದರೆ, ಅವನ ಆಸ್ತಿಯ ಬಗ್ಗೆ ಆ ಮಗುವಿನ ಹಕ್ಕು, ಅವನ ಸ್ವಂತ ಮಗು ಅಥವಾ ಅವನ ಮಗುವಿನ ಹಕ್ಕಿನಂತಿರುವುದಿಲ್ಲ.

# ಈ ಲೇಖಕಿಗೆ ಹೋರಾಟವೇ ಉಸಿರು

ಕಳೆದ ಜೂನ್ ತಿಂಗಳಲ್ಲಿ ಅದೊಂದು ಅಪೂರ್ವ ಸಂದರ್ಭ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಯೋಜನೆಯೊಂದರ ಉದ್ಘಾಟನೆ ಬಂಗಾಳಿ ಲೇಖಕಿಯೊಬ್ಬರಿಂದ. ಸಾಹಿತ್ಯದಲ್ಲಿ ಮಹಿಳಾ ಧ್ವನಿಯನ್ನು ಅಂಚಿಗೆ ನೂಕಲಾಗುತ್ತಿದೆಯೆಂಬ ಕೂಗಿನ ನಡುವೆ ಲೇಖಕಿಯೊಬ್ಬಳಿಂದ ಕನ್ನಡ ಸಾಹಿತ್ಯದ ಪುನರ್ ಪೌಲ್ಯೀಕರಣ ಯೋಜನೆಯ ಉದ್ಘಾಟನೆ ; ಅದು ಬಂಗಾಳಿಯ ಪ್ರಖ್ಯಾತ ಲೇಖಕಿ 'ಮಹಾಶ್ವೇತಾದೇವಿ' ಯವರಿಂದ. ಈ ಲೇಖಕಿಯ ಆಗಮನದ ಮುನ್ಸೂಚನೆಯನ್ನು ಕೆಲವು ದಿನಗಳ ಮುಂಚೆಯೇ ತಿಳಿದ ನಾವು ಕೆಲವು ಗೆಳತಿಯರು ಆಕೆಯ ಬರವಣಿಗೆಗಾಗಿ, ಆಕೆಯ ಮಾಹಿತಿಗಾಗಿ ಸಾಕಷ್ಟು ತಡಕಾಡಿದೆವು ; ಸ್ವಲ್ಪ ಸಂಗ್ರಹಿಸಿದೆವು. ಕಡೆಗೆ ಆಕೆ ಬೆಂಗಳೂರಿಗೆ ಕಾಲಿಟ್ಟ ದಿನವೇ 'ಅಚಲ' ಪರವಾಗಿ ಕೆಲವು ಘಂಟೆಗಳ ಸಂಭಾಷಣೆ ಆಕೆಯ ಬಹುಮುಖ ವ್ಯಕ್ತಿತ್ವವನ್ನು ಪರಿಚಯಿಸುವುದಿಲ್ಲವಾದರೂ ಆಕೆಯ ಕೆಲವೊಂದು ಆಲೋಚನೆಗಳನ್ನು ಇಲ್ಲಿ ದಾಖಲಿಸಲು ಪ್ರಯತ್ನಿಸಿದ್ದೇವೆ :

ಮಹಾಶ್ವೇತಾದೇವಿ ಹುಟ್ಟಿದ್ದು ಢಾಕದಲ್ಲಿ 1926ರಲ್ಲಿ. ಆದರೆ ಅವರು ಬಂಗಾಳದ ವಿಭಜನೆಯ ಪ್ರಕ್ರಿಯೆಯಲ್ಲಿ ಅಸಂಖ್ಯಾತ ಬಂಗಾಳಿಗಳಿಗೆ ಎದುರಾದ ಯಾತನೆಗಳಲ್ಲಿ ಒಳಗಾದವರಲ್ಲ. ಅವರ ತಂದೆ, ತಾತ, ಮುತ್ತಾತರಂದಿರೆಲ್ಲ ಬ್ರಿಟಿಷ್ ಸರ್ಕಾರದಲ್ಲಿ ಉನ್ನತ ಅಧಿಕಾರಿಗಳಾಗಿದ್ದವರು. ತಂದೆಗೆ ವರ್ಗವಾದಾಗ ಬೇರೆ ಬೇರೆ ಸ್ಥಳಗಳಿಗೆ ಹೋಗುವುದು ಕುಟುಂಬದವರಿಗೆ ಅನಿವಾರ್ಯವಾದ್ದರಿಂದ ಬಂಗಾಳದ ವಿಭಜನೆಗೆ ಮೊದಲೇ ಈ ಕುಟುಂಬ ಈಗಿನ ಪಶ್ಚಿಮ ಬಂಗಾಳದತ್ತ ಬಂದದ್ದು ಒಂದು ಸಹಜ ಘಟನೆಯಾಗಿತ್ತು. ಮಕ್ಕಳ ವಿದ್ಯಾಭ್ಯಾಸದ ಬಗ್ಗೆ ತಂದೆಗೆ ತುಂಬಾ ಕಳಕಳಿಯಿದ್ದುದರಿಂದ ಕಲ್ಕತ್ತಾ ಅವರ ಕುಟುಂಬಕ್ಕೆ ನೆಲೆಯಾಯಿತು. ಬಾಲ್ಯದ ಶಿಕ್ಷಣವೆಲ್ಲಾ ಮಹಾಶ್ವೇತ ಪಡೆದದ್ದು ಶಾಂತಿನಿಕೇತನದಲ್ಲಿ ನಂತರ ಕಲ್ಕತ್ತೆ ವಿದ್ಯಾನಿಲಯದ ಇಂಗ್ಲಿಷ್ ಎಂ. ಎ. ಪದವಿ ಪಡೆದರು.

ಸೃಜನಶೀಲತೆ ಕ್ರಿಯಾತ್ಮಕ ಅಭಿವ್ಯಕ್ತಿಗೆ ಸಕಲ ಅವಕಾಶಗಳೂ ಇದ್ದ ಶಾಂತಿನಿಕೇತನದಲ್ಲಿ ಮಹಾಶ್ವೇತಾದೇವಿಯ ಪ್ರತಿಭೆ ಅರಳತೊಡಗಿತು. ಪದ್ಯಗಳನ್ನು ರಚಿಸುವುದು, ನಾಟಕಗಳನ್ನು ಬರೆದು ನಿರ್ದೇಶಿಸುವುದು, ನಟಿಸುವುದು, ಪ್ರಯೋಗಗಳನ್ನು ಮಾಡುವುದು–ಹೀಗೆ ಎಲ್ಲ ಬಗೆಯ ಜವಾಬ್ದಾರಿಯನ್ನು, ಮಹಾಶ್ವೇತಾ ಸಮರ್ಥವಾಗಿ ನಿರ್ವಹಿಸುತ್ತಿದ್ದುದರಿಂದ 'ಬರವಣಿಗೆ'

ಶ್ರೀಮತಿ ಮಹಾಶ್ವೇತಾದೇವಿ ಪಶ್ಚಿಮ ಬಂಗಾಲದ ಪ್ರಸಿದ್ಧ ಲೇಖಕಿ. ಅಲ್ಲಿನ ಜೀತ ವಿಮುಕ್ತಿ ಸಂಸ್ಥೆಯ ಸಂಸ್ಥಾಪಕಿ. ದುಡಿಯುವ ಜನತೆಗೆ ಸಂಬಂಧಿಸಿದ ಅನೇಕ ಸಂಘಟನೆಗಳ ಪದಾಧಿಕಾರಿ.

'ಯುಗಾಂತರ' ಎಂಬ ಬಂಗಾಳಿ ದಿನ ಪತ್ರಿಕೆಯ ವರದಿಗಾರರಾಗಿ 'ಬೋರ್ತಿಕ' ತ್ರೈಮಾಸಿಕದ ಸಂಪಾದಕಿಯಾಗಿ ಕೆಲಸ ಮಾಡಿದ್ದಾರೆ. ತಮ್ಮ ಸಾಹಿತ್ಯ ಸಾಧನೆಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯಲ್ಲದೆ ಹಲವಾರು ಪುರಸ್ಕಾರಗಳಿಗೆ ಪಾತ್ರರಾಗಿದ್ದಾರೆ. ಅವರ ಸಮಾಜ ಸೇವೆಯನ್ನು ಗೌರವಿಸಿ ಭಾರತ ಸರ್ಕಾರವು 1986ರಲ್ಲಿ ಪದ್ಮಶ್ರೀಯನ್ನು ನೀಡಿ ಗೌರವಿಸಿದೆ.

ಅವರಿಗೆ ಹೆಚ್ಚುಗಾರಿಕೆಯೆನಿಸಿರಲಿಲ್ಲ. ತೀರ ಸಹಜ ಕಲಿಕೆಯ ಅಂಗವೇ ಆಗಿ ಮೈಗೂಡಿತ್ತು ಎಂದ ನೆನೆಯುವ ಮಹಾಶ್ವೇತೆಯವರ ಮೊಟ್ಟ ಮೊದಲ ಪ್ರಕಟಿತ ಲೇಖನ (1939) ಕವಿ ಮಹೇಂದ್ರರ "My Childhood" ಪ್ರಬಂಧವನ್ನು ಕುರಿತದ್ದಾಗಿತ್ತು. ಅದನ್ನು ರವೀಂದ್ರರೇ ಮೆಚ್ಚಿ, ಮಕ್ಕಳ ಪತ್ರಿಕೆಯಲ್ಲಿ ಪ್ರಕಟಿಸಲು ಕಾರಣರಾಗಿದ್ದರು. ಆದರೆ ಮೆಟ್ರಿಕ್‌ಗಾಗಿ ಕಲ್ಕತ್ತೆಗೆ ವಾಪಸ್ಸಾದ ನಂತರ ಬರವಣಿಗೆಯೂ ನಿಂತಿತು. ಬಿ.ಎ. ಪೂರೈಸುವ ಮೊದಲೇ ಮದುವೆಯಾಯಿತು.

ಮಹಾಶ್ವೇತಾ ಮತ್ತೆ ಬರೆಯತೊಡಗಿದ್ದು 1950ರಲ್ಲಿ ಅದು ತುಂಬ ಗಂಭೀರವಾದ, ಇತಿಹಾಸ ಸಂಶೋಧಿತ, ವಾಸ್ತವಾಂಶಗಳನ್ನು ದಾಖಲಿಸುವ ರೂಪದ ಬರವಣಿಗೆ. ಜಾನ್ಸಿರಾಣಿ ಲಕ್ಷ್ಮೀಭಾಯಿಯ ಅನಾದೃಶ ಶೌರ್ಯ, ಹೋರಾಟದ ವ್ಯಕ್ತಿತ್ವ ಈಕೆಯನ್ನು ಆಕರ್ಶಿಸಿತು. ಆ ಖಂಡಕ್ಕೆ ಹೋಗಿ ಅಲ್ಲಿನ ಬುಡಕಟ್ಟು ಜನರ ವಾಚಕ ಸಂಸ್ಕೃತಿಯಲ್ಲಿ, ಕತೆಗಳಲ್ಲಿ ಲಾವಣಿಗಳಲ್ಲಿ ಅವರ ಅನುಭವಗಳ ನೆನಪುಗಳಲ್ಲಿ ಹರಳುಗಟ್ಟಿರುವ ಲಕ್ಷ್ಮೀದೇವಿಯ ವ್ಯಕ್ತಿತ್ವವನ್ನು, ಆ ಕಾಲದ ಇತಿಹಾಸ ವನ್ನು ಶೋಧಿಸಿ, ಅದಕ್ಕೆ ಜೀವನ ಚರಿತ್ರೆಯ ರೂಪ ನೀಡಿದ ಮಹಾಶ್ವೇತೆ, ಇತಿಹಾಸ, ಸಾಮಾನ್ಯ ಜನತೆಯ ಬದುಕಿನ ಹೋರಾಟ ಮತ್ತು ಬರವಣಿಗೆಗಳನ್ನು ಸಂಯುಕ್ತವಾಗಿ ಗ್ರಹಿಸಬಲ್ಲ ತಮ್ಮದೇ ಆದ ದಾರಿ ಯೊಂದನ್ನು ರೂಪಿಸಿಕೊಂಡರು. ಅವರ ಮೊದಲ ಕಾದಂಬರಿ 'ಝಾನ್ಸಿರಾಣಿ' 1956ರಲ್ಲಿ ಧಾರವಾಹಿ ಯಾಗಿ ಪ್ರಕಟವಾಯಿತು. ನಂತರ ಕ್ಷೇತ್ರ ಸಂಶೋಧನೆ ಮಾದರಿಯ ತಮ್ಮ ಕೆಲಸ ಮುಂದುವರಿಸಿ, ಸಂಗ್ರಹಿಸಿದ ದಾಖಲೆಗಳನ್ನು ಆಧರಿಸಿ ಅನೇಕ ಪತ್ರಿಕೆಗಳಿಗೆ ಬರೆಯ ತೊಡಗಿದರು. ಬಿ.ಎ. ಆದ ಎಷ್ಟೋ ಕಾಲದ ನಂತರ 1963 ರಲ್ಲಿ ಕಲ್ಕತ್ತಾ ವಿಶ್ವವಿದ್ಯಾನಿಲಯದಿಂದ ಎಂ.ಎ. ಪದವಿ ಪಡೆಯಲು ಸಾಧ್ಯವಾಯಿತು. ನಂತರ 1980ರ ವರೆಗೆ ಕಾಲೇಜೊಂದರಲ್ಲಿ ಉಪನ್ಯಾಸಕಿಯಾಗಿ ದುಡಿದ ಅನುಭವವೂ ಅವರದಾಯಿತು, 1982ರಲ್ಲಿ ಆ ಕೆಲಸ ವನ್ನು ಬಿಟ್ಟು ಪೂರ್ಣವಾಗಿ ಬುಡಕಟ್ಟು ಜನರ ಸಂಘಟನೆ ಗಾಗಿ ತಮ್ಮ ಬದುಕನ್ನು ಮೀಸಲಿಟ್ಟರು.

"ಬದುಕು ಗಣಿತವಲ್ಲ, ಮನುಷ್ಯನು ರಾಜಕೀಯದ ಆಟಕ್ಕೆ ಹೇಳಿ ಮಾಡಿಸಿದ ಜೀವಿಯಲ್ಲ. ನನ್ನ ದೃಷ್ಟಿ ಯಲ್ಲಿ ಎಲ್ಲ ರಾಜಕೀಯ ಕಾರ್ಯಕ್ರಮಗಳು ಮನುಷ್ಯನ ಅಸ್ತಿತ್ವ ಮತ್ತು ನ್ಯಾಯದ ನೆಲೆಯನ್ನು ಪಡೆದಿರಬೇಕು. ಸದ್ಯದ ಸಾಮಾಜಿಕ ವ್ಯವಸ್ಥೆ ಪರಿವರ್ತನೆಗೊಳ್ಳಬೇಕು. ಸ್ವಾತಂತ್ರ್ಯ ಸಂದ ಇಷ್ಟು ವರ್ಷಗಳ ನಂತರವೂ ನನ್ನ ಜನ ಹಸಿವಿನಿಂದ ನರಳುತ್ತಿದ್ದಾರೆ ; ಭೂಹೀನರಾಗಿದ್ದಾರೆ; ಜೀತದಾಳುಗಳಾಗಿದ್ದಾರೆ. ಈ ಗಿರುವ ವ್ಯವಸ್ಥೆಯ ವಿಮೋಚನೆ ತರುವ ದಿಕ್ಕಿನಲ್ಲಿ ಸೋತಿದೆ, ಇಂಥ ಸ್ಥಿತಿಯೇ ನನ್ನ ಬರವಣಿಗೆಯ ಹಿಂದಿರುವ ಸ್ಫೂರ್ತಿಯ ಸೆಲೆ, ನಾನು ನನ್ನ ಶಕ್ತ್ಯಾನುಸಾರ ಜನ ಸಮುದಾಯದ ಬಗ್ಗೆ ಬರೆಯುತ್ತಾ ಹೋಗುತ್ತೇನೆ. ಆದ್ದರಿಂದಲೇ ನಾನು ಯಾವುದೇ ನಾಚಿಕೆ ಮತ್ತು ಅಳುಕುಗಳಿಲ್ಲದೆ ಸಮಾಜ ವನ್ನು ಎದುರಿಸಬಲ್ಲೆ."—ತಮ್ಮ "ಅಗ್ನಿಗರ್ಭ" ಕಥಾ ಸಂಕಲನದ ಮುನ್ನುಡಿಯಲ್ಲಿ ಬರೆದಿರುವ ಮಹಾಶ್ವೇತಾ ದೇವಿಯವರ ಮಾತುಗಳು ಅವರ ಒಟ್ಟು ಸಾಹಿತ್ಯದ ಹಾಗೂ ಜೀವನದ ವ್ಯಾಖ್ಯೆಯೇ ಆಗಿದೆಯೆಂದರೂ ತಪ್ಪಾಗದು.

ಪತ್ರಿಕೆಗಳಿಗೆ ಹಣಗಳಿಕೆಗಾಗಿಯೇ ಬರೆವ 'ವೃತ್ತಿ ನಿರತ ಲೇಖಕಿ ನಾನು' ಎಂದು ನಿರ್ದಾಕ್ಷಿಣ್ಯವಾಗಿ ಒಪ್ಪಿ ಕೊಳ್ಳುವ ಮಹಾಶ್ವೇತಾದೇವಿ, ತಮ್ಮ ಕಾದಂಬರಿ, ಕಥೆ, ನಾಟಕಗಳಲ್ಲಿ ಬಿಂಬಿಸುವುದು ತಾವು ನಿಕಟ ಸಂಪರ್ಕ ಪಡೆದಿರುವ ಬುಡಕಟ್ಟು ಜನರು 'ನಾಗರೀಕ'ರೆನಿಸಿಕೊಂಡ ವರೊಂದಿಗೆ ದಿನನಿತ್ಯ ತಮ್ಮ ಅಸ್ತಿತ್ವಕ್ಕಾಗಿ ನಡೆಸುತ್ತಿರುವ ಹೋರಾಟಗಳನ್ನೇ. ಅವರ ಬದುಕಿನ ವಾಸ್ತವಗಳನ್ನೇ ಈ ಲೇಖಕಿಗೆ ನಿತ್ಯ ಸಾಮಗ್ರಿ. ಸ್ವತಃ ಅಂಥ ಹೋರಾಟ ದಲ್ಲಿ ನೇರವಾಗಿ ಪಾಲು ಪಡೆಯದಿದ್ದರೂ ತಮ್ಮ ಹಕ್ಕು, ಸವಲತ್ತುಗಳ ಬಗ್ಗೆ ಸಂವಿಧಾನದದತ್ತ ಅವಕಾಶಗಳ ಬಗ್ಗೆ ಲಭ್ಯವಿರುವ ಕಾನೂನುಗಳ ಬಗ್ಗೆ, ತಿಳುವಳಿಕೆ ನೀಡುವ

ಮತ್ತು ಈ ಹೋರಾಟಗಳ ವ್ಯಾವಹಾರಿಕ ಅಂಶಗಳಿಗೆಲ್ಲಾ ಆಳುವ ವರ್ಗದ ಜೊತೆ ಬುಡಕಟ್ಟಿನವರ ಪ್ರತಿನಿಧಿಗಾಗಿ ನೆರವಾಗುವ ಮೂಲಕ ಮಹಾಶ್ವೇತೆ ಈ ಹೋರಾಟದ ಅನುಭವಗಳನ್ನು ತಮ್ಮದಾಗಿಸಿಕೊಂಡರು. ಈ ತಾದಾತ್ಮ್ಯದಿಂದ ಅವರ ಕೃತಿಗಳಲ್ಲಿ ಚಿತ್ರಿತವಾಗುವ ಬದುಕಿನಲ್ಲಿ ದೊರೆಯುವ ಸಹಜ ಗುಣದಿಂದ ವಿವಿಧ ಜನ ಸಂಘಟನಾಕಾರರಿಗೆ ಅವು ಸ್ಫೂರ್ತಿಯ ನೆಲೆಯಶಾಗಿವೆ. ಅಂಥಾ ಜನರ ಮಧ್ಯೆ ಮಹಾಶ್ವೇತಾರವರ ರಚನೆಗಳು ಮನೆ ಮಾತಾಗಿದೆ. ಜನಸಾಮಾನ್ಯರ ನಡುವೆ ಜನಪ್ರಿಯ ರಾದ ವಿಶಿಷ್ಟ ಲೇಖಕಿ. ಆದರೆ ಈ ಜನಪ್ರಿಯತೆ ಅಗ್ಗದ ಮನೋರಂಜನೆ, ಪಲಾಯನವಾದ ಕಾಲ್ಪನಿಕ ಬಣ್ಣ ಗಳಿಂದ ಸಾಧಿಸಿದ್ದಲ್ಲ. ಜನರಿಗೆ ತಮ್ಮನ್ನೇ, ತಮ್ಮ ಸಂಕಷ್ಟಗಳನ್ನೇ ಈಕೆ ಬರದಿದ್ದಾರೆಂದು ಹುಟ್ಟಿರುವ ಅಭಿಮಾನ, ವಿಶ್ವಾಸಗಳಿಂದ ದೊರೆತಿರುವ ಜನಪ್ರಿಯತೆ ಅದು.

ಬುಡಕಟ್ಟು ಜನರ ಪ್ರೀತಿಯ ದೀದಿಯಶಾಗಿರುವ 66 ವರ್ಷ ವಯಸ್ಸಿನ ಮಹಾಶ್ವೇತಾದೇವಿ ಆ ಜನರ ಸಂಸ್ಕೃತಿಗೆ ಮಾರುಹೋದವರು. ಸಮಾಜದ ಎಲ್ಲರಿಗಿಂತ ಅತಿ ಹೆಚ್ಚು ಶೋಷಿತರು ಎನ್ನುವುದೇ ಅವರಿಗೆ ಈ ಜನರ ಬಗೆಗಿರುವ ಅತಿ ಹೆಚ್ಚಿನ ಕಾಳಜಿ. "ಸಂದರ್ಭದಲ್ಲಿ ಬುಡಕಟ್ಟು ಜನಾಂಗದವರು ನಮಗಿಂತ ಹೆಚ್ಚು ನಾಗರೀಕರೂ, ಹೆಚ್ಚು ಸುಸಂಸ್ಕೃತರೂ ಆಗಿದ್ದಾರೆ. ಅವರಲ್ಲಿ ಹೆಣ್ಣು ಮಗು ಒಂದೂ ಅವಹೇಳನದ ವಸ್ತುವಲ್ಲ. ಅವರು ವರದಕ್ಷಿಣೆಗಾಗಿ ಕೊಲ್ಲುವವರಲ್ಲ, ವಿಧವಾ ವಿವಾಹ ಅವರ ಸ್ವೀಕೃತ ಬದುಕಿನ ರೀತಿಗಳಲ್ಲಿ ಒಂದು. ವಿಚ್ಛೇದನಕ್ಕೆ ಅಲ್ಲಿ ಅವಕಾಶವುಂಟು. ಹೆಣ್ಣು ಗಂಡಿಗೆ ಸಮಾನ ವಾಗಿಯೇ ಗೌರವಿಸಲ್ಪಡುವುದರಿಂದ ಮದುವೆಯಾಗದಿರುವುದು ಅಪಮಾನಕರ ಸಂಗತಿಯಲ್ಲ. ಈ ಎಲ್ಲ ದೃಷ್ಟಿಯಿಂದ ನಮಗಿಂತ ಹೆಚ್ಚಿನ ಉನ್ನತ ಸಂಸ್ಕೃತಿ ಅವರದು" ಎನ್ನುತ್ತಾರೆ.

ಬುಡಕಟ್ಟು ಜನರ ಬದುಕಿನೊಂದಿಗೆ ಬೆರತು, ಅವರ ಅನುಭವದ ಸಾಮಗ್ರಿಯಿಂದ ತಮ್ಮ ಸೃಜನ ಶೀಲ ಸಾಹಿತ್ಯ ರಚಿಸುವ ಈ ಲೇಖಕಿ ಅವರ ಜೀವನ ಚಿತ್ರಣದಲ್ಲಷ್ಟೇ ತೃಪ್ತರಲ್ಲ. ಸ್ವತಃ ಆ ಜನ ತಮ್ಮ ಬಗ್ಗೆ ಏನು ಚಿಂತಿಸುತ್ತಾರೆ, ಏನು ನಂಬುತ್ತಾರೆ, ತಮ್ಮ ಅಗತ್ಯ ಗಳ ಬಗ್ಗೆ ಅವರ ಅರಿವೆಷ್ಟು ಎಂಬುದನ್ನು ಬುಡಕಟ್ಟು ಜನರ ಭಾಷೆಯಲ್ಲೇ ದಾಖಲಿಸುವುದು ಮಹಾಶ್ವೇತೆಯ ಮುಖ್ಯ ಕಾಳಜಿಗಳಲ್ಲೊಂದು. ಇದಕ್ಕಾಗಿಯೇ ಅವರ ತಂದೆಯು ನಡೆಸುತ್ತಿದ್ದ ಸಾಹಿತ್ಯ ಪತ್ರಿಕೆ "ವಾರ್ತಿಕಾ" (ಬೋರ್ತಿಕಾ) ವನ್ನು 1980ರ ನಂತರ ತಮ್ಮ ಅಗತ್ಯ ಹಾಗೂ ಧ್ಯೇಯೋದ್ದೇಶಗಳಿಗನುಗುಣವಾಗಿ ಬದಲಾಯಿಸಿದರು; ಅದಕ್ಕೆ ಹೊಸ ತಾತ್ವಿಕ ರೂಪ, ಚೌಕಟ್ಟುಗಳನ್ನು ನೀಡಿದರು.

ವಿದ್ಯಾವಂತ, ಸುಶಿಕ್ಷಿತ ಕುಟುಂಬದಿಂದ ಬಂದ ಮಹಾಶ್ವೇತಾದೇವಿಯವರು ಹೆಣ್ಣಾಗಿ ಹುಟ್ಟಿದ್ದಕ್ಕಾಗಿ ಯಾವ ಅನಾನುಕೂಲಗಳನ್ನು ಎದುರಿಸಬೇಕಾಗಿ ಬರಲಿಲ್ಲ. ಅವರೇ ಹೇಳಿಕೊಳ್ಳುವಂತೆ ಅವರ ಸಾಮಾಜಿಕ, ಸಾರ್ವಜನಿಕ ಜೀವನಕ್ಕೆ ಮನೆಯವರೆಲ್ಲರ ಸಮ್ಮತಿ ಬೆಂಬಲವಿತ್ತು. ಅವರ ತಾಯಿ ಮಹಾಶ್ವೇತೆಯವರ ಸೋದರಿಯರು ನಿಷ್ಕ್ರಿಯರಾಗಿ ಮನೆಯಲ್ಲಿ ಕುಳಿತು ಆರಾಮದ ಜೀವನ ಸಾಗಿಸುತ್ತಿದ್ದರೆ "ಮಹಾಶ್ವೇತೆಯನ್ನು ನೋಡಿ ಕಲಿಯಿರಿ. ನೀವು ಏಕೆ ಹೊರಗೆ ಸಾರ್ವಜನಿಕ ಸೇವಾಕಾರ್ಯದಲ್ಲಿ ತೊಡಗಬಾರದು" ಎಂದು ಆಕ್ಷೇಪಿಸುತ್ತಿದ್ದರಂತೆ. ಈ ಕಾರಣದಿಂದಲೇ ಏನೋ ಮಹಾಶ್ವೇತೆಯವರಿಗೆ ಮಹಿಳಾ ಪ್ರತ್ಯೇಕತೆ ಅಗತ್ಯವೂ ಎಂದೆನಿಸುವುದಿಲ್ಲ ಹಾಗೆಯೇ ಅದರ ಅನಿವಾರ್ಯತೆಯ ಬಗೆಗೆ ಅವರದು ದಿವ್ಯ ನಿರ್ಲಕ್ಷ್ಯ.

ಮಹಿಳೆಯರದೇ ಪ್ರತ್ಯೇಕ ಸಂಘಟನೆಗಳಲ್ಲಾಗಲೀ, "ಮಹಿಳಾವಾದಿ ಹೋರಾಟ"ಗಳಲ್ಲಾಗಲೀ ಮಹಾಶ್ವೇತೆಯವರಿಗೆ ನಂಬಿಕೆಯಿಲ್ಲ. "ಬುಡಕಟ್ಟು ಜನಾಂಗಗಳು ಇಮ್ಮಡಿಯಶಾಗಿಯೇ ಬಡತನದ ರೇಖೆಯ ಕೆಳಗೇ ಬದುಕು

ತ್ತಿವೆ. ಇಡೀ ಸಮುದಾಯವೇ ಆರ್ಥಿಕ ಶೋಷಣೆಗೆ ಒಳಗಾಗಿರುವಾಗ ಅವರೊಳಗಿಂದ ಸ್ತ್ರೀ ಶೋಷಣೆ ಎಂದು ಪ್ರತ್ಯೇಕಿಸಲು ಆಸ್ಪದವೆಲ್ಲಿ ? ಅವರ ಪುರುಷರೂ ಅಷ್ಟೇ ಶೋಷಿತರಲ್ಲವೇ ? ಆದ್ದರಿಂದ ಅವರನ್ನು ಒಂದು ಇಡಿಯಾಗಿ ಪರಿಗಣಿಸುತ್ತೇನೆ. ವರ್ಗ ಸಂಘರ್ಷದಲ್ಲಿ ನಂಬಿಕೆಯಿಟ್ಟಿದ್ದೇನೆ. ಇಡೀ ಸಮುದಾಯದ ಆರ್ಥಿಕ ಪ್ರಗತಿಗಾಗಿ ಯತ್ನಿಸುವುದೇ ನನ್ನ ಹೋರಾಟದ ಗುರಿ" ಎಂಬುದು ಅವರ ದೃಢ ನಿಲುವು.

ಸರಳತೆ ಮಹಾಶ್ವೇತಾದೇವಿಯವರಲ್ಲಿ ಮೇಲ್ನೋಟಕ್ಕೆ ಎದ್ದು ಕಾಣುವ ಅಂಶ. ಅದು ಅವರ ಜೀವನದ ಸೂತ್ರ ಕೂಡ. ಬುಡಕಟ್ಟು ಜನಾಂಗದ ಜನರೊಂದಿಗಿನ ಅವರ ಒಡನಾಟ ಹಾಗೂ ಅವರ ಸಂಸ್ಕೃತಿಯೊಂದಿಗೆ ಅವರು ನಾಗರೀಕ ಜಗತ್ತಿನ ವ್ಯವಹಾರಗಳನ್ನು ಕೊಂಚ ಅನುಮಾನದಿಂದಲೇ ಕಾಣುತ್ತಾರೆ. ದೀನ ದಲಿತರೊಂದಿಗೆ ಬೆಚ್ಚಿಕೊಳ್ಳುವ ಅವರ ಸರಳತೆ ಇಲ್ಲಿ ಸ್ವಲ್ಪವಾದರೂ ಮಾಯವಾಗುತ್ತದೆಯೆಂಬುದು ಅವರನ್ನು ಸಂದರ್ಶಿಸಿದವರ ಅನುಭವ.



## ಸತ್ಯಜಿತ್‌ರಾಯ್

(6ನೇ ಪುಟದಿಂದ)

'ಮಹಾನಗರ್', 'ಕಾಂಚನ ಜಂಗ' ಮತ್ತು 'ಚಾರುಲತಾ', ಚಿತ್ರಗಳಲ್ಲಿ 'ಸ್ತ್ರೀದೃಷ್ಟಿ' ಹೆಚ್ಚು ಗ್ರಹಿಸುವ ದೃಷ್ಟಿಯಾಗಿ ಪರಿವರ್ತಿತವಾಗುತ್ತದೆ ಮತ್ತು ಇದರಿಂದಾಗಿ ಸ್ತ್ರೀ ಪಾತ್ರಗಳು ಹೆಚ್ಚು ವಿಶಿಷ್ಟವಾಗುತ್ತವೆ

'ಕಾಂಚನ ಜಂಗ' ಚಿತ್ರದಲ್ಲಿ ಮಾನಿಷನ ನೋಟ ಬಹು ದೂರಕ್ಕೆ, ಪರ್ವತದ ಶಿಖರದತ್ತ ನೆಟ್ಟಿರುತ್ತದೆ. ಅದೇ ದೃಷ್ಟಿ ನಂತರದಲ್ಲಿ ಅವಳ ಸಾಮಾಜಿಕ ವಲಯಕ್ಕೆ ಸೇರದ, ಅವರೆ ಅವಳೊಂದಿಗೆ ಹೊಸ ಮತ್ತು ಆಕರ್ಶಕ ವಿಚಾರಗಳನ್ನು ಮಾತನಾಡಬಲ್ಲ ಯುವಕನ ಹಿಂದಕ್ಕೆ ಸರಿಯುತ್ತದೆ, ಇಲ್ಲವೇ ಕೆಲವೊಮ್ಮೆ ರಸ್ತೆ ಬದಿಯಲ್ಲಿ ಕುಳಿತಿರುವ ಚಿಕ್ಕ ಬಾಲಕನ ಸುತ್ತ ಸುಳಿಯುತ್ತದೆ. ಆದರೆ ಅಧಿಕಾರಿಯುತ ಧೋರಣೆಯ ಅವಳ ತಂದೆ ಸೂಚಿಸಿದ ಅವಳ ಬಾಳಗೆಳೆಯನಾಗಬೇಕಾದ ವರಮಹಾಶಯನತ್ತ ಮಾತ್ರ ಅವಳ ದೃಷ್ಟಿ ಹಾಯುವುದಿಲ್ಲ. ಅವಳ ಮಾತುಗಳು ಮೆದು, ಮಧುರವಾದದ್ದು, ಆದರೆ ಅವಳ ತಿರಸ್ಕಾರ ಅವಳಕಣ್ಣುಗಳಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ ಅವಳ ತಂದೆ ರಾಯ್‌ಬಹೂದೂರ್ ಅವನ ಎಂದಿನ ಪ್ರಶ್ನಾತೀತ ಅಧಿಕಾರಯುತ ವಾಣಿಯಲ್ಲಿ ಪ್ರವಾದಿಯಂತೆ ದಿನವನ್ನು ಆರಂಭಿಸುತ್ತಾನೆ. ಅವನ ಮಾತು ಒಂದು ರೀತಿಯ ಕಟ್ಟಪ್ಪಣೆಯಂತೆ ಇಂದು ಬ್ಯಾನರ್ಜಿ ಸನ್ನನ್ನು ಸೂಚಿಸುತ್ತಾನೆ, ಎಂದು ಅವನ ತಂದೆ ಹೇಳುವಾಗಲೂ ಅವನಲ್ಲಿ ವಿಪುಲವಾದ ಆತ್ಮವಿಶ್ವಾಸ ತುಂಬಿದೆ. ಆ ಆತ್ಮವಿಶ್ವಾಸಕ್ಕೆ ಕಾರಣವಾದ ಅಧಿಕಾರದಲ್ಲಿ ಆ ಬ್ರಿಟಿಷರಿಂದ ಅವನಿಗೆ ನೇರವಾಗಿ ಹಸ್ತಾಂತರವಾಗುತ್ತಿದೆ. ಚಿತ್ರದಲ್ಲಿ ಎಲ್ಲೂ ತಂದೆ ಮತ್ತು ಮಗಳ ನಡುವೆ ಘರ್ಷಣೆಯಾಗುವುದೇ ಇಲ್ಲ. ಅಪ್ಪ ಸೂಚಿಸಿದ ವರನನ್ನು ಕಣ್ಣಿನಿಂದಲೇ ತಿರಸ್ಕರಿಸುತ್ತಲೇ ಅವಳು ಸಮಾಧಾನ ಚಿತ್ತದಿಂದ ನುಡಿಯುತ್ತಾಳೆ ; 'ಮಂಜು ಇನ್ನೇನು ಮುಸುಕಬಹುದು ಎಂದೆನಿಸುತ್ತದೆ ; ಕೊನೆಗೂ ಬ್ಯಾನರ್ಜಿಯು ಮದುವೆಗೆ ಅವಳ ಅಭಿಪ್ರಾಯವನ್ನು ಕೇಳಬೇಕೆಂದಿರುವಾಗ ಮತ್ತೆ ಮಾನಿಷಳನ್ನು ಮಂಜು ಸುತ್ತುವರಿದು ಅವಳು ಮಾತಾಡುವುದರಿಂದ ತಪ್ಪಿಸಿಕೊಳ್ಳುತ್ತಾಳೆ. ಇದೇ ಮಂಜು ಮೇಲಕ್ಕೆ ಸುತ್ತುತ್ತಾ ಹೋಗಿ ರಾಯ್ ಬಹ್‌ಬಹದ್ದೂರ್‌ನನ್ನು ಆವರಿಸುತ್ತದೆ. ಅವನ ಅಧಿಕಾರ ಪ್ರಪಂಚವನ್ನು ಅಳಿಸಿಹಾಕುವಂತೆ ಇದು ಧ್ವನಿಸುತ್ತದೆ. ಈ ರೀತಿ ರಾಯ್‌ಬಹಹಾದೂರ್‌ನ ದೃಷ್ಟಿ

ಕೋನವನ್ನು ಮುರಿಯುವ ಪ್ರಯತ್ನವನ್ನು ಹವಾಮಾನದ ಬದಲಾವಣೆಯ ಘಟನೆಯ ಮೂಲಕ ಸೂಚಿಸಲಾಗುತ್ತದೆ, ಕ್ರಮೇಣ ಮಂಜು ಕರಗುತ್ತದೆ. ಆಗ ಪ್ರಶ್ನೆ ಹಾಗೆಯೇ ನಮ್ಮ ಮುಂದೆ ಉಳಿಯುತ್ತದೆ : ಮಾನಿಷಾ ಕಲ್ಕತ್ತೆಗೆ ಹಿಂತಿರುಗಿದ ನಂತರವೂ ಬ್ಯಾನರ್ಜಿ ಸೂಚಿಸಿದ ಸಲಹೆಯನ್ನು ತಿರಸ್ಕರಿಸುವಳೇ ? ಅಥವಾ ಬ್ಯಾನರ್ಜಿಯ ಇನ್ನೊಂದು ಮುಖವಾದ ಪರಿಚಿತ ನಿರುದ್ಯೋಗಿ ಯುವಕನನ್ನು ಆರಿಸಿಕೊಳ್ಳುವಳೇ ? ಈ ಪ್ರಶ್ನೆಗೆ ಚಿತ್ರದಲ್ಲಿ ಸ್ಪಷ್ಟವಾದ ಉತ್ತರ ದೊರೆಯುವುದಿಲ್ಲ. ಮಾನಿಷಳ ಸಂಶಯ ಮತ್ತು ಸಂಕೋಚಗಳಿಗೇ ಹೆಚ್ಚು ಒತ್ತು ಕೊಡುವಂತೆ ಚಿತ್ರ ಮುಕ್ತವಾಗಿ ಕೊನೆಗೊಳ್ಳುತ್ತದೆ.

'ಮಹಾನಗರ್' ಚಿತ್ರದಲ್ಲೂ ಈ ರೀತಿಯ ಮುಕ್ತವಾದ ಅಂತ್ಯವನ್ನು ಕಾಣಬಹುದು. ಅಲ್ಲಿಯೂ ಎಳೆ ವಯಸ್ಸಿನ ಹೆಂಡತಿ ಪ್ರಶ್ನೆಯೊಂದನ್ನು ಕೇಳುತ್ತಾಳೆ : ಇದೊಂದು ದೊಡ್ಡ ಪಟ್ಟಣ. ಎಷ್ಟೊಂದು ವಿವಿಧ ವ್ಯವಹಾರಗಳು. ನಮಗೆ ಏಕೆ ನೌಕರಿಗಳು ಸಿಗುವುದಿಲ್ಲ ? ಅವಳ ವ್ಯಕ್ತಿತ್ವದಲ್ಲಿ ಉಂಟಾಗುವ ಬದಲಾವಣೆಯನ್ನು ಅಲ್ಲಿ ಕನ್ನಡಿ ಪ್ರತಿಬಿಂಬಿಸುತ್ತದೆ, ಜೊತೆ ಜೊತೆಗೆ ಅವಳ ಆಂಗ್ಲೋ ಇಂಡಿಯನ್ ಸಹೋದ್ಯೋಗಿ ಇಬ್ಬರೂ ಒಂದೇ ಜಾಗದಲ್ಲಿ ಕೆಲಸ ಮಾಡುತ್ತಿದ್ದರೂ, ಬೇರೆಯದೇ ಆದ ಪ್ರಪಂಚಕ್ಕೆ ಸೇರಿದವರಾಗಿರುತ್ತಾರೆ. ನಂತರದ ಪ್ರಸಂಗಕ್ಕೆ ಮೊದಲೇ ಈ ಘಟನೆ ಮುನ್ಸೂಚಿಯಾಗಿ ಬರುತ್ತದೆ. ಅವಳ ಸಹೋದ್ಯೋಗಿಗೆ ಉಂಟಾದ ಅನ್ಯಾಯಕ್ಕೆ ಪ್ರತಿಭಟಿಸುವುದಕ್ಕಾಗಿ ಇವಳು ತನ್ನ ಕೆಲಸಕ್ಕೆ ರಾಜೀನಾಮೆ ಕೊಡುತ್ತಾಳೆ. ಇದಕ್ಕೆ ಮುಂಚೆ ಅವಳ ಹೋರಾಟ ಬೇರೆಯದೇ ನೆಲದಲ್ಲಿ ಸಾಗಿತ್ತು. ಬೆಂಗಾಲಿ ಮಧ್ಯಮ ವರ್ಗದ ಗೃಹಿಣಿಯೊಬ್ಬಳ ಹೋರಾಟ ದುಡಿಯುವ ಮಹಿಳೆಯ ಹೋರಾಟವಾಗಿ ಪರಿವರ್ತನೆಗೊಂಡಿತು. ಕೊನೆಯ ದೃಶ್ಯದಲ್ಲಿ ಗಂಡನೊಂದಿಗೆ ಜೊತೆಯಲ್ಲಿ ನಿಂತು ಕಲ್ಕತ್ತಾ ನಗರವನ್ನು ದೃಷ್ಟಿಸುತ್ತಾ ನಿಲ್ಲುತ್ತಾಳೆ. ಮೊದಲಿಗೆ ಅವಳ ಗಂಡ ಅವಳನ್ನು ಕೆಲಸದಿಂದ ರಾಜೀನಾಮೆ ಕೊಡಲು ಹೇಳಿದಾಗ ಅವಳು ತಿರಸ್ಕರಿಸಿರುತ್ತಾಳೆ. ಆದರೆ ಕೆಲಸ ಕಳೆದುಕೊಂಡ ಗಂಡ ಹೆಂಡತಿಯನ್ನು ರಾಜೀನಾಮೆ ಕೊಡದಂತೆ ತಡೆಯಲು ಧಾವಿಸಿ ಬರುವ ವೇಳೆಗೆ ಹೆಂಡತಿ ತನ್ನದೇ ಕಾರಣಕ್ಕಾಗಿ ರಾಜೀನಾಮೆ ಕೊಟ್ಟಾಗಿರುತ್ತದೆ. ಒಟ್ಟಿನಲ್ಲಿ ಕೆಲಸ ಕಳೆದುಕೊಂಡ ಇಬ್ಬರೂ ಕಡೆಯ ದೃಶ್ಯದಲ್ಲಿ ತಮ್ಮ ಜಂಟೀ ಹೋರಾಟದ ಕಣವಾದ ಮಹಾನಗರ ಕಲ್ಕತ್ತೆಯತ್ತ ನೋಡುತ್ತಿರುವಂತೆ ಸಿನಿಮಾ ಕೊನೆಗೊಳ್ಳುತ್ತದೆ.

ತನ್ನ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳುವ ಸ್ತ್ರೀ ದೃಷ್ಟಿಯೊಂದಿಗೆ ಕ್ಯಾಮರಾ ದೃಷ್ಟಿಯು ಗುರುತಿಸಿಕೊಳ್ಳುವುದನ್ನು ಅತ್ಯಂತ ಸಮರ್ಥ ಸೂತ್ರವಾಗಿ ಬಳಸಿರುವುದನ್ನು 'ಚಾರುಲತಾ' ದಲ್ಲಿ ಕಾಣಬಹುದು. ಚಾರು ತೆರದ ಕಿಟಕಿಯಿಂದ ರಸ್ತೆಯಲ್ಲಿ ಹೋಗುವ ಜನರ ಚಲನವಲನಗಳನ್ನು ಗಮನಿಸುತ್ತಾ ನಿಂತಿರುತ್ತಾಳೆ. ತನ್ನ ಮುಚ್ಚಿಬಿಟ್ಟಿರುವ ಮನೆಯತ್ತ ಗಂಡ ಧಾವಿಸುವುದನ್ನು ನೋಡುತ್ತಾ ನಿಂತಿರುತ್ತಾಳೆ. ಚಡಪಡಿಸುವ ಅವಳ ಮನಸ್ಥಿತಿ ಮತ್ತು ಅವಳಿಂದ ದೂರ ಸರಿಯುವ ಜನರೂ ಇವೆರಡೂ ಒಟ್ಟಿಗೆ ಸೇರಿ ಒಂದು ರೀತಿಯ ಭೀತಿಯ ವಿಚಿತ್ರ ಪರಿಣಾಮವನ್ನು ಉಂಟುಮಾಡಲಾಗುತ್ತದೆ. ಇಂತಹ ಭೀತಿಯಿಂದ ಮುಕ್ತವಾಗುವ ಸನ್ನಿವೇಶಗಳು ಚಿತ್ರದಲ್ಲಿ ಎರಡು ಬಾರಿ ಬರುತ್ತವೆ. ಚಾರು ತನ್ನ ಮತ್ತು ಅಮುಲನ ಸಂಬಂಧದ ಆಳವನ್ನು ಗ್ರಹಿಸುವ ನೆಲೆಯಲ್ಲಿ ಉಯ್ಯಾಲೆ ತೂಗುತ್ತಾ ಇರುವುದನ್ನು ನೋಡುತ್ತಾ ಇರುತ್ತೇವೆ. ಅಮುಲನು ನಿರ್ಗಮಿಸಿದ ನಂತರ ಚಾರು ಮತ್ತು ಭೂಪತಿ ಹೊಸ ಸನ್ನಿವೇಶವೊಂದರಲ್ಲಿ ಇರುವಾಗ ಚಾರು ಮುರಿದು ಬಿದ್ದ ಸನ್ನಿವೇಶವೊಂದರಲ್ಲಿ ಇರುವಾಗ ಚಾರು ಮುರಿದುಬಿದ್ದ ಸಂಬಂಧದ ಕೊಂಡಿಯನ್ನು ಮತ್ತೆ ಕೈಗೆತ್ತಿಕೊಳ್ಳುತ್ತಾಳೆ. ಭೂಪತಿಯ ತಲೆಯಲ್ಲಿನ ಬಿಳಿ ಕೂದಲನ್ನು ಕೀಳುತ್ತಾ ಕುಳಿತಿರುತ್ತಾಳೆ. ಇದು ಕೋಮಲವಾದರೂ ತಮ್ಮ ಎಲ್ಲಾಕಾಲವೂ ಮುಗಿದುಹೋದುದನ್ನು

ಸೂ ಚಿ ಸು ವ ನಿರಾಶಾದಾಯಕವಾದ ಛಾಯೆಯಾಗಿ ಉಳಿಯುತ್ತದೆ.

ಈ 'ಸ್ತ್ರೀ ದೃಷ್ಟಿ' ಸತ್ಯಜಿತ್‌ರಾಯ್ ಅವರ ಚಿತ್ರಗಳಲ್ಲಿ ಒಂದು ಹಂತದಲ್ಲಿ ಅತ್ಯಂತ ಪ್ರಮುಖವಾಗಿ ಕಂಡುಬಂದಿತು. ಅವರ ಚಿತ್ರಗಳಲ್ಲಿ ಹೆಣ್ಣಿನ ಪಾತ್ರಗಳು ಪ್ರಮುಖವಾಗಿರುವುದು ನಿಜವಾದರೂ ಹೆಣ್ಣಿನ ದೃಷ್ಟಿಯಿಂದಲೇ ಒಟ್ಟು ಚಿತ್ರದ ದೃಷ್ಟಿಕೋನವನ್ನು ರೂಪಿಸುವಲ್ಲಿ ಈ ಕೆಲವು ಚಿತ್ರಗಳು ಮುಖ್ಯವಾಗಿವೆ.

ಸಂಗ್ರಹಾನುವಾದ

ಕೃಪೆ : ವಿಮನ್ಸ್ ಇಕ್ವಾಲಿಟಿ

---

# ವರದಕ್ಷಿಣೆ ಸಾವು

ಇತ್ತೀಚೆಗೆ ವರದಕ್ಷಿಣೆ ಕಾರಣದ ಸಾವು ಹೆಚ್ಚಾಗ ತೊಡಗಿದೆ. ಪ್ರತಿ ದಿನ ಪತ್ರಿಕೆಗಳಲ್ಲಿ ಇದರ ಬಗೆಗೆ ಬರುತ್ತಿರುವ ವರದಿಗಳೇ ಅದಕ್ಕೆ ಸಾಕ್ಷಿ. ಅಲ್ಲೊಂದು ಇಲ್ಲೊಂದು ಪ್ರಕರಣಗಳು ಇತ್ಯರ್ಥ ಕಂಡು ಗಂಡ, ಅತ್ತೆ ಮುಂತಾದವರಿಗೆ ಅಷ್ಟಿಷ್ಟು ಶಿಕ್ಷೆ ಸಿಗುವ ಪ್ರಸಂಗಗಳೂ ಉಂಟು. ಆದರೆ ಒಂದಷ್ಟು ವರ್ಷ ಜೈಲು ಶಿಕ್ಷೆ ವಿಧಿಸಿಬಿಟ್ಟರೆ ಅವರ ಮನ ಪರಿವರ್ತನೆಯಾಗುತ್ತದೆ ಎಂದು ಹೇಳಲಾಗದು.

## ಸ್ಪಂದನ

ವರದಕ್ಷಿಣೆಗಾಗಿ ಹೆಂಡತಿ ಅಥವಾ ಸೊಸೆಯನ್ನು ಹಿಂಸಿಸಿ ಕೊಲ್ಲುವುದು ಬೇರೆ ಯಾವುದೇ ಕೊಲೆಗೆ ಸಮನಲ್ಲವೇ ? ಜೀವಾವಧಿ ಅಥವಾ ಮರಣದಂಡನೆಯಂಥ ಶಿಕ್ಷೆಯನ್ನು ಏಕೆ ವಿಧಿಸುವುದಿಲ್ಲ ? ವರದಕ್ಷಿಣೆ ಕುರಿತ ಕಾನೂನು ಮೃದುವಾಗಿದೆಯೋ, ಹೇಗೆ ?

ಅನೇಕ ಬಾರಿ ವರದಕ್ಷಿಣೆ ಪ್ರಕರಣಗಳಿಗೆ ಸರಿಯಾದ ಸಾಕ್ಷಿ ಸಿಗುವುದಿಲ್ಲ. ಇದ್ದರೂ ಜನ ಬಂದು ಹೇಳುವುದಿಲ್ಲ. ಹೀಗಾಗಿ ಆರೋಪಿಯ ಕೃತ್ಯ ಸಾಬೀತಾಗದೆ ಅವನಿಗೆ ಮುಕ್ತಿ ಸಿಕ್ಕಿಬಿಡುತ್ತದೆ.

ಶಿಕ್ಷೆಯ ಮಾತಿರಲಿ, ವರದಕ್ಷಿಣೆ ವಿರುದ್ಧ ಸಾಮಾಜಿಕ ಚಳವಳಿಯೊಂದು ರೂಪಗೊಳ್ಳುವುದು ಅಗತ್ಯ. ವ್ಯವಸ್ಥೆಯ ಬದಲಾವಣೆಯೊಂದಿಗೆ ವ್ಯಕ್ತಿಗಳ ಮನ ಪರಿವರ್ತನೆ ಸುಲಭ ಸಾಧ್ಯ. ವಿದ್ಯಾವಂತರಾದ ನಮ್ಮ ಮಹಿಳೆಯರು ಅತ್ತೆ, ಪತಿಯ ಹಿಂಸೆಗೆ ಜಗ್ಗಬಾರದು. ಅದನ್ನು ಎದುರಿಸಿ ಅವರಿಗೆ ಪಾಠ ಕಲಿಸುವ ಮನೋದಾರ್ಢ್ಯ ಬೆಳೆಸಿಕೊಳ್ಳಬೇಕು. ಸಾಧ್ಯವಾದರೆ ಗಂಡ, ಅತ್ತೆಗೆ ತಿಳುವಳಿಕೆ ಬರುವಂತೆ ಪ್ರಯತ್ನ ಪಡಬೇಕು. ಬಹುಶಃ ಅವರಿಗೆ ಶಿಕ್ಷಣದ ಕೊರತೆ ಇರಬೇಕು. ತಾವು ಮಾಡುವುದೇ ಸರಿ ಎಂಬ ಭಾವನೆ ಇರಬಹುದು. ಅವರ ತಪ್ಪನ್ನು ಅವರಿಗೇ ತೋರಿಸಿ ಅವರು ತಿದ್ದಿಕೊಳ್ಳುವಂತೆ ಪ್ರಯತ್ನಿಸಬೇಕು. ಆಗಲೂ ಅವರು ಕ್ರೂರಿಗಳಾಗಿಯೇ ಇದ್ದರೆ ಅವರನ್ನು ತ್ಯಜಿಸಿ ಮನೆಯಿಂದ ಹೊರಬರುವಂಥ ದೃಢ ಮನಸ್ಕತೆಯನ್ನು ಬೆಳಸಿಕೊಳ್ಳಬೇಕು. ಇದಕ್ಕೆಲ್ಲ ಮಹಿಳೆಗೆ ಶಿಕ್ಷಣ, ಉದ್ಯೋಗ ಮಂತೂ ಅತ್ಯಗತ್ಯ.

— ಗಂಗಾ

